# ಭಾಷಾವಿಷಯಗಳ ಬಗ್ಗೆ ಅಂತಾರಾಷ್ಟ್ರೀಯ ಅಭಿಪ್ರಾಯಗಳು

## ಮಾತೃಭಾಷೆ – ಶಿಕ್ಷಣ, ಜ್ಞಾನ, ವಿಜ್ಞಾನ ಮತ್ತು ಇಂಗ್ಲಿಷ್ ಕಲಿಕೆಗೆ ಕೀಲಿಕೈ

**ಜೋಗಾಸಿಂಗ್ ಪಿಎಚ್‌ಡಿ (ಯಾರ್ಕ್, ಯೂ.ಕೆ.)**

**ಮೊಬೈಲ್**: + 91–9915709582; **ಇ–ಅಂಚೆ** : jogasinghvirk@yahoo.co

### I. ಈ ದಾಖಲೆಗಳ ಬಗ್ಗೆ

ಕಳೆದ ತಿಂಗಳು, ಕೇಂದ್ರೀಯ ನಾಗರೀಕ ಸೇವಾ ಪರೀಕ್ಷೆಗಳಲ್ಲಿ ಭಾರತೀಯ ಭಾಷೆಗಳ ಸ್ಥಾನ ಕುರಿತು ಕೆಲವು ಹಿನ್ನಡೆ ಉಂಟು ಮಾಡುವಂಥ ಏರ್ಪಾಡುಗಳಿದ್ದ ಒಂದು ಸೂಚನೆಯನ್ನು ಭಾರತ ಸರ್ಕಾರ ಹೊರಡಿಸಿತು. ಅರ್ಹತೆಯ ಲೆಕ್ಕಾಚಾರ ಮಾಡಲು ಈ ಸೂಚನೆಯು ಇಂಗ್ಲಿಷ್ ಭಾಷೆಗೆ ಆಗಲೇ ನೀಡಿದ್ದ ಪ್ರಾಮುಖ್ಯತೆಗೆ ಹೆಚ್ಚುವರಿಯಾಗಿ ಇಂಗ್ಲಿಷ್ ಕಡ್ಡಾಯ ಪ್ರಶ್ನೆ ಪತ್ರಿಕೆಯಲ್ಲಿ ಗಳಿಸುವ ಅಂಕಗಳನ್ನೂ ಸಹ ಸೇರಿಸಲು ಪ್ರಸ್ತಾವನೆ ಇಟ್ಟಿತು. ಇದು ಭಾಷಾ ಚರ್ಚೆಯನ್ನು ಮತ್ತೊಮ್ಮೆ ಬಡಿದೆಬ್ಬಿಸಿದೆ. ಈ ಮೇಲೆ ಉಲ್ಲೇಖಿಸಿರುವ ಸೂಚನೆಯನ್ನು ಭಾರತೀಯ ಸರ್ಕಾರ ನೀಡಿದ್ದರಿಂದ ಉದ್ಭವಿಸಿರುವ ಪರಿಸ್ಥಿತಿಗೆ ಉತ್ತರವಾಗಿ ಈ ಪ್ರಸಕ್ತ ದಾಖಲೆಯನ್ನು ಬರೆಯಲಾಗಿದೆ. ಸರ್ಕಾರದ ಈ ಕ್ರಮವನ್ನು 'ಎ ಲಾ ಪಾರ್ ಇಗ್ನೋರೆನ್ಸ್ ಎಕ್ಸಲಾನ್ಸ್' – ಎಂದರೆ 'ಅಜ್ಞಾನದ ಅತ್ಯುನ್ನತ ಮಟ್ಟದಲ್ಲಿ ಕೈಗೊಳ್ಳಲಾದ, ಸಾಟಿ ಇಲ್ಲದ ಮೂರ್ಖ ಕ್ರಮ' ಎಂದು ಕರೆಯಬಹುದು.

ಭಾಷಾ ತಜ್ಞರು ನೀಡಿದ ಬಹು ಕಟು ತೀರ್ಪು ಮತ್ತು ವಿವಿಧ ರಾಜಕೀಯ ವಲಯಗಳಿಂದ ವ್ಯಕ್ತವಾದ ಕಡು ವಿರೋಧಗಳ ಪರಿಣಾಮವಾಗಿ ಈ ಸೂಚನೆಯನ್ನು ಭಾರತ ಸರ್ಕಾರವು 15ನೇ ಮಾರ್ಚ್‌ನಂದು ವಾಪಸ್ ಪಡೆಯಿತು. ಇಷ್ಟಾದರೂ ಸಹ, ಭಾರತೀಯ ಭಾಷೆಗಳ ವಿರುದ್ಧ ಭಾರತದ ಉನ್ನತ ವರ್ಗದವರ ಭೇದಭಾವನೆ, ಅವರ ವಸಾಹತು ಶಾಹಿ ಸೋದರರಿಗಿಂತ ಇನ್ನೂ ಹೇಯವಾಗಿದೆ. ಭಾಷಾ ಪ್ರಶ್ನೆಯು ಬೇರ್ಪಡಿಸಲಾಗದಂತೆ, ಶಿಕ್ಷಣ, ವೈಜ್ಞಾನಿಕ ಅಭಿವೃದ್ಧಿ, ಸಾಮಾನ್ಯ ಜ್ಞಾನ, ಸಂಸ್ಕೃತಿ, ಪರಂಪರೆ ಮತ್ತು ಬಹುಮುಖ್ಯವಾಗಿ, ಪರದೇಶದ ಒಂದು ಭಾಷೆಯನ್ನು ಕಲಿಯುವ ಸರಿಯಾದ ವಿಧಾನ – ಇಂಥ ವಿಷಯಗಳ ಜೊತೆ ತಳಕು ಹಾಕಿಕೊಂಡಿದೆ. ಈ ದಾಖಲೆಯು ಈ ವಿಷಯಗಳ ಬಗ್ಗೆ ಇರುವ (ವೃತ್ತಿ) ನಿರತ ಅಂತಾರಾಷ್ಟ್ರೀಯ ಅಭಿಪ್ರಾಯದ ಒಂದು ಸಂಕ್ಷಿಪ್ತ ವರದಿಯನ್ನು ನೀಡುವ ಪ್ರಯತ್ನ.

ಭಾರತೀಯ ಭಾಷೆಗಳಿಗೆ ಅವುಗಳಿಗೆ ಅವಶ್ಯಕವಾದ ಮತ್ತು ನ್ಯಾಯಯುತವಾದ ಅಂತಸ್ತನ್ನು ಸಹಾ ಬ್ರಿಟಿಷರ ಹೊರನಡೆಯ ನಂತರ ನೀಡಲಾಗಿದ್ದರೂ ಸಹ, ಕಳೆದ ಸುಮಾರು 30 ವರ್ಷಗಳಿಂದ ಈಚೆಗೆ ಅವುಗಳ ದುಸ್ಥಿತಿ ಮತ್ತಷ್ಟು ಹದಗೆಡುತ್ತಲೇ ಬಂದಿದೆ. ಇಂಗ್ಲಿಷ್ ಭಾಷೆಯು ಶಾಲೆಗಳಲ್ಲಿ ಶಿಕ್ಷಣದ ಮಾಧ್ಯಮವಾಗಿ ಸಹ ಭಾರತೀಯ ಭಾಷೆಗಳನ್ನು ಹೊರಕ್ಕೆ ತಳ್ಳುತ್ತಿದೆ. ಇದಕ್ಕೆ ನಿಜವಾದ ಕಾರಣ, ಭಾರತೀಯ ಉನ್ನತ ವರ್ಗದವರ (ಎಲೀಟ್‌ಗಳ) ಕುತಂತ್ರದ ಪಟ್ಟಭದ್ರ ಹಿತಾಸಕ್ತಿಗಳೇ ಆಗಿದ್ದರೂ ಸಹ, ಈ ಅವಿವೇಕದ ಬೆಂಬಲವಾಗಿ ಈ ಮುಂದೆ ಸೂಚಿಸಿರುವ ಸುಳ್ಳು ವಾದಗಳನ್ನು ಸೃಷ್ಟಿಸಿ, ಗಟ್ಟಿಯಾಗಿ ಹೇಳಿ, ಸ್ಥಿರಗೊಳಿಸಲಾಗುತ್ತದೆ.

1. ಇಂಗ್ಲಿಷ್ ವಿಜ್ಞಾನ ಮತ್ತು ಜ್ಞಾನದ ಭಾಷೆ, ಆದ್ದರಿಂದ ಈ ಕ್ಷೇತ್ರಗಳಲ್ಲಿ ಪ್ರಗತಿ ಸಾಧಿಸಲು ಇಂಗ್ಲಿಷ್‌ನಲ್ಲಿ ಪ್ರಾವೀಣ್ಯತೆ ಅಗತ್ಯ ಎಂದೂ ;
2. ಇಂಗ್ಲಿಷ್ ಅಂತಾರಾಷ್ಟ್ರೀಯ ಸಂವಹನ ಮತ್ತು ವ್ಯವಹಾರದ ಭಾಷೆ, ಮತ್ತು ಅದಿಲ್ಲದೆ ಯಾವುದೇ ಅಂತಾರಾಷ್ಟ್ರೀಯ ವಿನಿಮಯ ಅಸಾಧ್ಯ ಎಂದು.

ಈ ಮೇಲಿನ ರೀತಿಯ ಹೇಳಿಕೆಗಳು ಭಾಷೆ, ಮತ್ತು ವಿಜ್ಞಾನ, ಶಿಕ್ಷಣ, ಸಾಮಾನ್ಯವಾಗಿ ಜ್ಞಾನ ಮತ್ತು ಅಂತಾರಾಷ್ಟ್ರೀಯ ಭಾಷಾ ಸ್ಥಿತಿಗಳ ನಡುವೆ ಇರುವ ಸಂಪೂರ್ಣ ಅಜ್ಞಾನದ ಪರಿಣಾಮ. ಈ ಅಜ್ಞಾನದ ಮುಖವಾಡವನ್ನು ಕಿತ್ತೊಗೆಯುವುದು ಈ ದಾಖಲೆ ಅಥವಾ ಪ್ರಬಂಧದ ಉದ್ದೇಶ.

## II. ಮಾತೃಭಾಷೆ, ಇತರ ಭಾಷೆ, ಮತ್ತು ಶಿಕ್ಷಣ

ಇಂದಿನ ಕಾಲದ ಪ್ರಮುಖ ಜ್ಞಾನ ಶಾಖೆಯಾದ, ಭಾಷೆ ಮತ್ತು ಶಿಕ್ಷಣದ ನಡುವಿನ ಸಂಬಂಧಿಸಿದಂತೆ ಅಂತಾರಾಷ್ಟ್ರೀಯ ಅನುಭವ ಮತ್ತು ಪಾಂಡಿತ್ಯ ಹಾಗೂ ಸಾಮಾನ್ಯವಾಗಿ ಶಿಕ್ಷಣ– ಜ್ಞಾನ ಮತ್ತು ಭಾಷೆಯ ನಡುವಿನ ಸಂಬಂಧದ ಬಗ್ಗೆ ಮೊದಲ ಹಂತದಲ್ಲಿ ಗಮನಹರಿಸುವುದು ಸಮಂಜಸ. ಯುನೆಸ್ಕೊ 1953 ರಲ್ಲಿ ಪ್ರಕಟಿಸಿದ 'ದಿ ಯೂಸ್ ಆಫ್ ವರ್ನಾಕ್ಯುಲರ್ಸ್ ಇನ್ ಎಜುಕೇಶನ್' ಎನ್ನುವ ಪುಸ್ತಕದಿಂದ ಉಲ್ಲೇಖಿಸಲಾಗಿರುವ ಮುಂದಿನ ಹೇಳಿಕೆಯು ಕಣ್ತೆರೆಸುವಂತಿದೆ; ಪುಸ್ತಕವು ಈ ವಿಷಯದ ಬಗ್ಗೆ ಅಂತಾರಾಷ್ಟ್ರೀಯ ಸಂಶೋಧನೆ ಮತ್ತು ಸುಜ್ಞಾನಗಳ ರಸಗಟ್ಟಿಯ ಪ್ರಸ್ತುತಿ ಆಗಿದೆ.

"ಒಂದು ಮಗುವಿಗೆ ಶಿಕ್ಷಣ ನೀಡಲು ಅದರ ಮಾತೃಭಾಷೆಯೇ ಅತ್ಯುತ್ತಮ ಮಾಧ್ಯಮ. ಮನೋವೈಜ್ಞಾನಿಕವಾಗಿ, ಅದು ಮಗುವಿನ ಮನಸ್ಸಿನಲ್ಲಿ ಸ್ವಯಂ ಚಾಲಿತವಾಗಿ ವ್ಯಕ್ತಪಡಿಸುವುದು ಮತ್ತು ಅರ್ಥಗ್ರಹಿಕೆಗೆ ಕೆಲಸ ಮಾಡುವ ಅರ್ಥಪೂರ್ಣ ಚಿಹ್ನೆಗಳ ವ್ಯವಸ್ಥೆ. ಸಾಮಾಜಿಕವಾಗಿ, ಅದು ಮಗು ಸದಸ್ಯನಾಗಿರುವ ಸಮುದಾಯದವರೊಡನೆ ಗುರುತಿಸುವ ರೀತಿ. ಶೈಕ್ಷಣಿಕವಾಗಿ, ಒಂದು ಅಪರಿಚಿತ ಭಾಷಾ ಮಾಧ್ಯಮಕ್ಕಿಂತ ಹೆಚ್ಚು ವೇಗವಾಗಿ ಅದರ ಮೂಲಕ ಮಗು ಕಲಿಯುತ್ತದೆ."
*@ (ಯುನೆಸ್ಕೋ, ೧೯೫೩:೧೧)*

ಯುನೆಸ್ಕೋದ ಈ ಅಭಿಪ್ರಾಯವು ಒಂದು ಬಹಳ ವ್ಯಾಪಕ ಸಂಶೋಧನೆಯ ಪರಿಣಾಮ. ಇದನ್ನು ಯುನೆಸ್ಕೋ 1968ರಲ್ಲಿ ಮತ್ತೆ ಹೇಳಿತ್ತು.:

"... ಮಾತೃಭಾಷೆಯ ಉಪಯೋಗವನ್ನು ಶಿಕ್ಷಣದ ಘಟ್ಟದಲ್ಲಿ ಎಷ್ಟು ಸಾಧ್ಯವೋ ಅಷ್ಟು ದೀರ್ಘ ಕಾಲಕ್ಕೆ ವಿಸ್ತರಿಸಬೇಕು.
*@ (ಯುನೆಸ್ಕೋ, ೧೯೬೮:೬೯೧)*

ಯುಎನ್‌ನ 2004ರ ಅಭಿವೃದ್ಧಿ ವರದಿಯಲ್ಲಿ ಈ ಮುಂದೆ ಸೂಚಿಸಿರುವಂತೆ ದಾಖಲಿಸಿದೆ:

"ಫಿಲಿಪ್ಪೀನ್ಸ್‌ನಲ್ಲಿ ದ್ವಿ ಭಾಷಾ ಶೈಕ್ಷಣಿಕ ನೀತಿಯ (ಟ್ಯಾಗಲಾಗ್ ಮತ್ತು ಇಂಗ್ಲಿಷ್) ಎರಡು ಭಾಷೆಗಳಲ್ಲಿ ಪ್ರಾವೀಣ್ಯತೆ ಇದ್ದ ವಿದ್ಯಾರ್ಥಿಗಳು ಮನೆಯಲ್ಲಿ ಟ್ಯಾಗಲಾಗ್ ಮಾತನಾಡದ ವಿದ್ಯಾರ್ಥಿಗಳಿಗಿಂತ ಹೆಚ್ಚು ಉತ್ತಮ ಸಾಧನೆ ಮಾಡಿದರು.
*@ (ಯುಎನ್‌ಡಿಪಿ ವರದಿ ೨೦೦೪:೬೧)*

ಈ ಮುಂದಿನ ಹೇಳಿಕೆ, ಒಂದು ಬೃಹತ್ ಬಹುಮತದ  ಜನ ಇಂಗ್ಲಿಷ್‌ನ ಸ್ಥಳೀಯ ಭಾಷಿಕರಾಗಿರುವ  ಯೂಎಸ್  ಬಗ್ಗೆ: "ಯುನೈಟೆಡ್ ಸ್ಟೇಟ್ಸ್‌ನಲ್ಲಿ, ತಮ್ಮ ಪ್ರಾಥಮಿಕ ಶಾಲಾ ವರ್ಷಗಳ ಅವಧಿಯ ಪೂರಾ ತಮ್ಮ ಮೊದಲ ಭಾಷೆ (ನವಾಜೋ) ಹಾಗೂ ಎರಡನೇ ಭಾಷೆಯಲ್ಲಿ (ಇಂಗ್ಲಿಷ್).. ಶಿಕ್ಷಣ ಪಡೆದ ನವಾಜೋ ವಿದ್ಯಾರ್ಥಿಗಳು, ಕೇವಲ ಇಂಗ್ಲಿಷ್‌ನಲ್ಲಿ ಮಾತ್ರ ಶಿಕ್ಷಣ ಪಡೆದ ತಮ್ಮ ನವಾಜೋ–ಭಾಷಿಕ ಸಹ ವಿದ್ಯಾರ್ಥಿಗಳಿಗಿಂತ ಹೆಚ್ಚು ಚೆನ್ನಾಗಿ ಸಾಧನೆ ಮಾಡಿದರು."
*@ (ಯುಎನ್‌ಡಿಪಿ ವರದಿ ೨೦೦೪:೬೧)*

ಯೂಎಸ್‌ಎ, ಕೆನಡಾ ಮತ್ತು ನ್ಯೂಜಿಲೆಂಡ್‌ಗಳಂಥ, ಪ್ರಧಾನವಾಗಿ ಇಂಗ್ಲಿಷ್ ಮಾತನಾಡುವ ದೇಶಗಳಲ್ಲೂ ಸಹ ಎಷ್ಟು ಭಾರಿ ಸಂಖ್ಯೆಯಲ್ಲಿ ಇಂಗ್ಲಿಷೇತರ ಮಾಧ್ಯಮ ಶಾಲೆಗಳು ಇವೆ ಎಂದು ತಿಳಿದುಕೊಳ್ಳುವ ಶ್ರಮಪಡಿರಿ ಎಂದು ಭಾರತದ ಆಂಗ್ಲೋ–ಹುಚ್ಚರನ್ನು ವೈಯಕ್ತಿಕವಾಗಿ ಮತ್ತು ಅತ್ಯಂತ ಕಳಕಳಿಯಿಂದ ವಿನಂತಿಸುತ್ತೇನೆ.  ಈ ವಿಷಯದ ಬಗ್ಗೆ ಪ್ರಪಂಚದಾದ್ಯಂತ ನಡೆಸಲಾದ ಅಧ್ಯಯನಗಳಿಂದ ಮುಂದಿನ ಹೇಳಿಕೆಗಳನ್ನು ಪ್ರಸ್ತುತಪಡಿಸಲಾಗಿದೆ :

"ಆದ್ದರಿಂದ, ಮೋಡಿಯಾನೋ (1968, 1973) ಮೆಕ್ಸಿಕೋದಿಂದ; ಫಿನ್‌ಲೆಂಡ್‌ನಿಂದ ಸ್ಕುಟ್‌ನಾಬ್–ಕಾಂಗಾಸ್ (1965) ಮತ್ತು ಲ್ಯಾಟಿನ್ ಅಮೇರಿಕಾಗಾಗಿ ಗುಡ್‌ಶಿನ್‌ಸ್ಕಿ (1975) **ವಿವಿಧ ಅಧ್ಯಯನಗಳಿಂದ ಸಂಗ್ರಹಿಸಿದ ಸಂಶೋಧನೆಯ ಪರಿಣಾಮಗಳ ಪ್ರಕಾರ – ಎಲ್ಲಿ ಶಾಲಾ ಶಿಕ್ಷಣಕ್ಕೆ ತಮ್ಮ ಮಾತೃಭಾಷೆಯಲ್ಲಿ ಪರಿಚಯ ಏರ್ಪಟ್ಟು, ನಂತರ ಎರಡನೇ ಭಾಷೆಯ ಒಳಗೆ ಸೇತುಬಂಧ ಮಾಡಲಾದ ಒಂದು ಹೆಚ್ಚಿನ ಪ್ರಮಾಣದ ಮಕ್ಕಳು, ಕೇವಲ ಎರಡನೇ ಭಾಷೆಯಲ್ಲಿ ಶಿಕ್ಷಣ ಪಡೆದ ಮಕ್ಕಳಿಗಿಂತ ಹೆಚ್ಚಾಗಿ ತಮ್ಮ ಮಾತೃಭಾಷೆಯಲ್ಲಿ ಸಾಕ್ಷರತೆ ಬೆಳೆಸಿಕೊಂಡು ವಿಷಯದ ಪರಿಣತಿ ಮತ್ತು ಎರಡನೇ ಭಾಷೆಯ ಸಾಮರ್ಥ್ಯದ ಹೆಚ್ಚಿನ ಮಟ್ಟ ಸಾಧಿಸಿ, ಶಾಲೆಯಲ್ಲಿ ಹೆಚ್ಚಿನ ಸಮಯ ಇರುತ್ತಾರೆ".** *@ (ಟಕ್ಕರ್, ೧೯೭೭:೩)*
('ಎರಡನೇ ಭಾಷೆ' ಎಂದರೆ 'ವಿದೇಶಿ ಭಾಷೆ' ಎಂದು ಓದಿಕೊಳ್ಳಿ)
ಸ್ವಿಡನ್‌ಗೆ ವಲಸೆ ಬಂದಿದ್ದ ಫಿನ್ನಿಶ್ ಮಕ್ಕಳ ಬಗ್ಗೆ ನಡೆಸಿದ ಅಧ್ಯಯನದಿಂದ ಈ ಮುಂದಿನ ಉಲ್ಲೇಖವನ್ನು ಉದ್ಧರಿಸಲಾಗಿದೆ: "ಪರೀಕ್ಷಾ ಪರಿಣಾಮಗಳಲ್ಲಿ ಪ್ರದರ್ಶಿತವಾದ ಫಿನ್ನಿಶ್–ಭಾಷಾ ಕೌಶಲಗಳು ಗಣಿತದಲ್ಲಿ ಗಳಿಸಿದ ಶ್ರೇಣಿಗೆ ಹತ್ತಿರದ ಸಂಬಂಧ ಹೊಂದಿವೆ.  ಮೇಲ್ತರದಲ್ಲಿ, ಗಣಿತದಲ್ಲಿ ಸಾಧನೆಗೆ ಸ್ವೀಡಿಶ್‌ಗಿಂತ  ಫಿನ್ನಿಶ್ ಹೆಚ್ಚು ಮುಖ್ಯ ಎಂದು ತೋರುತ್ತಿದೆ. ಸ್ವೀಡಿಶ್‌ನಲ್ಲಿ ಗಣಿತ  ಹೇಳಿಕೊಡಲಾಗುತ್ತದೆ ಎನ್ನುವುದು ನಿಜ ಇದ್ದರೂ ಸಹ **ಗಣಿತಕ್ಕೆ ಸಂಬಂಧಿಸಿದ ಪರಿಕಲ್ಪನಾ ಕಾರ್ಯಾಚರಣೆಗಳ ಮೇಲೆ ಪರಿಣತಿ ಸಾಧಿಸಲು ಮಾತೃಭಾಷೆಯ ಗಹನತೆಯ ಮಟ್ಟ (ಆ್ಯಬ್‌ಸ್ಟ್ರಾಕ್ಷನ್) ಹೆಚ್ಚು ಮುಖ್ಯ ಎನ್ನುವ ಪರಿಕಲ್ಪನೆಯನ್ನು ಈ ಪರಿಣಾಮ ಬೆಂಬಲಿಸುತ್ತದೆ... ಜೀವಶಾಸ್ತ್ರ, ರಸಾಯನಶಾಸ್ತ್ರ ಮತ್ತು ಭೌತಶಾಸ್ತ್ರದಂಥ ವಿಷಯಗಳಿಗೂ ಸಹ ಪರಿಕಲ್ಪನಾ  ಯೋಚನೆ ಅವಶ್ಯಕ ಮತ್ತು ಈ ವಿಷಯಗಳಲ್ಲಿ ತಮ್ಮ ಮಾತೃಭಾಷೆಯ ಮೇಲೆ ಒಳ್ಳೆ ಹಿಡಿತ ಹೊಂದಿದ್ದ ವಲಸಿಗ ಮಕ್ಕಳು, ತಮ್ಮ ಮಾತೃಭಾಷೆಯ ಮೇಲೆ ಕಡಿಮೆ ಹಿಡಿತ ಇದ್ದ ಮಕ್ಕಳಿಗಿಂತ ಹೆಚ್ಚಿನ ಮಟ್ಟದ ಯಶಸ್ಸನ್ನು ಸಾಧಿಸಿದರು.** *@ (ಸ್ಕುಟ್‌ನಾಬ್–ಕಾಂಗಾಸ್ ಮತ್ತು ಟೂಕೋಮಾ, ೧೯೭೬). "(ಪಾಲ್‌ಸ್ಟನ್, ೧೯೭೭:೯೪ರಲ್ಲಿ ಉಲ್ಲೇಖಿತ).*
ಯೂಎಸ್‌ಎ ಬಗ್ಗೆ ಇನ್ನೊಂದು ಹೇಳಿಕೆಯನ್ನು ಪರಿಶೀಲಿಸೋಣ :
"ಹೀಗೆಯೇ, ಯುನೈಟೆಡ್ ಸ್ಟೇಟ್ಸ್‌ನಲ್ಲಿ, ನಿಧಾನವಾಗಿ ಹರಡಿರುವಂತೆ ಕಾಣುವ ಒಂದು ಗ್ರಹಿಕೆ ಏನೆಂದರೆ, ತಮ್ಮ ದೇಶೀಯ ಭಾಷೆಯ ಅಭಿವೃದ್ಧಿಗೆ ಯಾವುದೇ ಗಮನ ನೀಡದೇ ಇರುವ, ಒಂದು ಏಕ ಭಾಷಿಕ ಇಂಗ್ಲಿಷ್ ಶೈಕ್ಷಣಿಕ ವ್ಯವಸ್ಥೆಯಲ್ಲಿ ಹಲವು ಇಂಗ್ಲಿಷೇತರ ನಿವಾಸಿಗಳು ವಿಲೀನಗೊಳಿಸಲ್ಪಟ್ಟರೆ, ಅವರಿಗೆ ಯಾವುದೇ ಪ್ರಯೋಜನ ಆಗುವುದಿಲ್ಲ."
*@ (ಟಕ್ಕರ್, ೧೯೭೭:೩)*

ಇದು ಘಾನಾದ ಒಂದು ಅಧ್ಯಯನದಿಂದ:

“ಬೋಕ್ಲಾಮಾ ಮತ್ತು ಟ್ಲೊ (1977:45) ವರದಿ ಮಾಡುತ್ತಾರೆ: ಘಾನಾದಲ್ಲಿ ಪ್ರಾಥಮಿಕ ಶಾಲೆ ಬಿಡುವ ಮಕ್ಕಳಲ್ಲಿ ಶೇಕಡ 5 ಮಾತ್ರ ಪ್ರೌಢಶಾಲೆಗೆ ಸೇರುತ್ತಾರೆ. ಜಾಯಿರ್‌ನಲ್ಲಿ, ಪ್ರಾಥಮಿಕ ಶಾಲೆ ಪ್ರವೇಶಿಸುವ ಮಕ್ಕಳಲ್ಲಿ ಕೇವಲ ಶೇಕಡ 30 ರಷ್ಟು ಮಾತ್ರ ಮಕ್ಕಳು ಮೊದಲ ನಾಲ್ಕು ಶ್ರೇಣಿಗಳನ್ನು ಪೂರೈಸುತ್ತಾರೆ. ಶಿಕ್ಷಣದ ಭಾಷೆಯನ್ನು ಕಲಿಯಲು ಅಸಾಮರ್ಥ್ಯ ಇದಕ್ಕೆ ಕಾರಣ ಎಂದು ಲೇಖಕರ ಅಭಿಪ್ರಾಯ.” *@ (ಫಾಸೋಲ್ಡ್, ೧೯೮೪:೩೦೬)*

ಹೆಚ್ಚುವರಿಯಾಗಿ, “ಆದರೆ, ಇಂಗ್ಲಿಷ್ ಬರದಿದ್ದರೆ, ಮಕ್ಕಳು ವಿಜ್ಞಾನ ಮತ್ತು ಗಣಿತಗಳನ್ನು ಕಲಿಯುವುದಿಲ್ಲ ಎನ್ನುವುದು ನಿಜವಲ್ಲ. ವಿಜ್ಞಾನದ ಪರಿಕಲ್ಪನೆಗಳಿಗೆ ಒಂದು ಭಾಷೆ ಮತ್ತು ಒಂದು ಸಂಸ್ಕೃತಿಯ ಕಟ್ಟುಪಾಡು ಇಲ್ಲ. ರಷ್ಯನ್ನರು, ಜರ್ಮನ್ನರು ಮತ್ತು ಫ್ರೆಂಚರು ಇಂಗ್ಲಿಷ್ ಇಲ್ಲದೆ ಸಾಧಿಸಿರುವ ಅತ್ಯುತ್ತಮ ವೈಜ್ಞಾನಿಕ ಶೋಧಗಳ ಬಗ್ಗೆ ಹೆಮ್ಮೆ ಪಟ್ಟುಕೊಳ್ಳಬಲ್ಲರು. 2003ರ ಟ್ರೆಂಡ್ಸ್ ಇನ್ ಇಂಟರ್‌ನ್ಯಾಶನಲ್ ಮ್ಯಾಥಮಾಟಿಕ್ಸ್ ಎಂಡ್ ಸೈನ್ಸ್ ಸ್ಟಡಿ (ಟಿಟಿಎಂಎಸ್), ನಲ್ಲಿ ಐದು ಪ್ರಮುಖ ಸಾಧಕರು, ಎಂದರೆ, ಸಿಂಗಾಪುರ, ರಿಪಬ್ಲಿಕ್ ಆಫ್ ಕೊರಿಯಾ, ಹಾಂಗ್‌ಕಾಂಗ್, ಚೈನೀತಾಯ್‌ಪೆಯ್ ಮತ್ತು ಜಪಾನ್–ಇಂಗ್ಲಿಷ್ ಮೊದಲನೇ ಭಾಷೆ ಆಗಿಲ್ಲದಿರುವ ದೇಶಗಳು.” *@ (ರಿಕಾರ್ಡೋ ಎಂಡ್ ನೊಲ್ಯಾಸ್ಕೋ ೨೦೦೯:೬)*

ಜ್ಞಾನದ ಪ್ರಪಂಚದಲ್ಲಿ ಇಂಗ್ಲಿಷ್ ಇಲ್ಲದೆ ಪ್ರಾಚೀನ ಭಾರತ ಮತ್ತು ಅರಬ್ ದೇಶಗಳಿಗೆ ಇದ್ದ ಗೌರವ ಸ್ಥಾನ ನಮಗೆಲ್ಲರಿಗೂ ಗೊತ್ತು. ಒಂದು ಅರ್ಥದಲ್ಲಿ ಆಗ ಇಂಗ್ಲಿಷ್ ಇನ್ನೂ ಹುಟ್ಟಿರಲೇ ಇಲ್ಲ.

ನಾರ್ವೆಯ ಗ್ಲೋಬಲ್ ಮಾನಿಟರಿಂಗ್ ರಿಪೋರ್ಟ್ (ಬೆನ್ಸನ್, 2005) ಹೀಗೆ ಹೇಳುತ್ತದೆ :

“ಆರು ವರ್ಷದ ಯೋರುಬಾ ಮಾಧ್ಯಮ ಪ್ರಾಥಮಿಕ ಯೋಜನೆ, ಮಾತೃಭಾಷೆಯಲ್ಲಿ ಪೂರ್ಣ ಆರು ವರ್ಷ ಪ್ರಾಥಮಿಕ ಶಿಕ್ಷಣದ ಜೊತೆಗೆ, ಒಂದು ವಿಷಯವಾಗಿ ಎಲ್2 ಬೋಧನೆ, ಕೇವಲ ಪ್ರಸ್ತುತ ಅಲ್ಲ, ಆದರೆ ಇಂಗ್ಲಿಷ್ ಶಿಕ್ಷಣಕ್ಕಿಂತ ಉತ್ತಮ ಪರಿಣಾಮ ನೀಡಿತು ಎಂದು ಸುಸ್ಪಷ್ಟವಾಗಿ ಪ್ರಾತ್ಯಕ್ಷಿಕೆ ನೀಡಿತು...”

“ಇತ್ತೀಚೆಗೆ ನಡೆಸಿದ ಹೆಚ್ಚುವರಿ ಕೆಲಸ ಇಂಥದೇ ವಿಷಯಗಳನ್ನು ತೋರಿಸಿ, ಮೇಲೆ ಪಟ್ಟಿ ಮಾಡಲಾದ ಮಾತೃ–ಭಾಷಾ ಆಧಾರಿತ ದ್ವಿ–ಭಾಷಾ ಕಾರ್ಯಕ್ರಮಗಳ ಇತ್ಯಾತ್ಮಕ ವಿಷಯಗಳನ್ನು ತೋರಿಸಲು ಈ ವಿಷಯಗಳಿಗಿಂತ ಮುಂದೆ ಹೋಗುತ್ತದೆ... *@ (ಬೆನ್ಸನ್, ೨೦೦೫)*, (ಮಾತೃ–ಭಾಷಾ ಆಧಾರಿತ ದ್ವಿ–ಭಾಷಾ ಶಿಕ್ಷಣ ಎಂದರೆ ಮಾತೃಭಾಷೆಯಲ್ಲಿ ಶಿಕ್ಷಣ ನೀಡಿ, ವಿದೇಶಿ/ಎರಡನೇ ಭಾಷೆಯನ್ನು ಒಂದು ವಿಷಯವಾಗಿ ಬೋಧಿಸಬೇಕು ಎಂದು ಹೇಳುತ್ತದೆ).

ಆದ್ದರಿಂದ, ಮಾತೃಭಾಷಾ ಮಾಧ್ಯಮದಿಂದ ಶಿಕ್ಷಣದಲ್ಲಿ ಸಾಧಿಸಲು ಆಗುವ ಯಶಸ್ಸನ್ನು ಒಂದು ವಿದೇಶಿ ಭಾಷಾ ಮಾಧ್ಯಮದ ಮೂಲಕ ಸಾಧಿಸುವುದು ಸಾಧ್ಯವೇ ಇಲ್ಲ, ಎಂದು ಪ್ರಪಂಚದಾದ್ಯಂತ ಮತ್ತೆ ಮತ್ತೆ ಪ್ರಮಾಣೀಕೃತ ಆಗುತ್ತಿದೆ. ಆದ್ದರಿಂದ, ಶಿಕ್ಷಣವು ಕೇವಲ ಮಾತೃಭಾಷಾ ಆಧಾರಿತ ಆಗಿದ್ದರೆ ಮಾತ್ರ ಯಶಸ್ವಿ ಆಗುತ್ತದೆ ಎಂದು ಹೇಳುವುದು ತಪ್ಪಲ್ಲ. ಇದಕ್ಕೆ ಕೆಲವು ಕಾರಣಗಳನ್ನು ಈ ಮುಂದಿನ ಹೇಳಿಕೆ ಸ್ಪಷ್ಟಪಡಿಸುತ್ತದೆ:

“ತಪ್ಪು ಮಾಡುವ ಹೆದರಿಕೆ ಇಲ್ಲದೆ ಇರುವುದರಿಂದ, ಒಂದು ಮಗುವಿಗೆ ತನ್ನ ಭಾಷೆಯ ತನ್ನನ್ನು ತಾನು ಸುಲಭವಾಗಿ ವ್ಯಕ್ತಪಡಿಸುವುದಕ್ಕೆ ಬೆಂಬಲ ನೀಡುತ್ತದೆ. ಎಂಎಲ್‌ಇ– (ಮಲ್ಟಿಲಿಂಗ್ಯುಯಲ್ ಎಜುಕೇಶನ್ – ಇಲ್ಲಿ ಮಾತೃಭಾಷೆ

ಶಿಕ್ಷಣದ ಮಾಧ್ಯಮ ಮತ್ತು ಇನ್ನೊಂದು ಭಾಷೆಯನ್ನು ಒಂದು ವಿಷಯವಾಗಿ ಬೋಧಿಸಲಾಗುವ ಶಿಕ್ಷಣ ಪದ್ಧತಿ–ಜೆಎಸ್) ಇದರಲ್ಲಿ ಏನು ಚರ್ಚೆ ಮಾಡಲಾಗುತ್ತಿದೆ ಮತ್ತು ತಮ್ಮನ್ನು ಏನು ಕೇಳಲಾಗುತ್ತಿದೆ ಎಂದು ಮಕ್ಕಳಿಗೆ ಅರ್ಥ ಆಗುವುದರಿಂದ ಕಲಿಯುವ ವಿಧಾನದಲ್ಲಿ ಮಕ್ಕಳ ಸಕ್ರಿಯ ಭಾಗವಹಿಸುವಿಕೆಯನ್ನು ಪ್ರೋತ್ಸಾಹಿಸುತ್ತದೆ. ತಮಗೆ ಈಗಾಗಲೇ ತಿಳಿದಿರುವುದಕ್ಕೆ ತಮ್ಮ ಪ್ರಪಂಚವನ್ನು ನಿರ್ಮಿಸಿ, ವಿವರಿಸಲು, ತಮ್ಮ ಯೋಚನೆಗಳನ್ನು ಹೇಳಲು ಮತ್ತು ಹೊಸ ಪರಿಕಲ್ಪನೆಗಳನ್ನು ಸೇರಿಸಲು ಅವರು ತಕ್ಷಣ ಎಲ್1 ಎಂದರೆ ತಮ್ಮ ಮಾತೃಭಾಷೆಯನ್ನು ಉಪಯೋಗಿಸಿಕೊಳ್ಳಬಹುದು. ಎಂಎಲ್ಇ ಶಿಕ್ಷಕರನ್ನು ಸಹ ಸಬಲಗೊಳಿಸುತ್ತದೆ. ವಿಶೇಷವಾಗಿ ಅವರು ವಿಶಾಲ ಸಂವಹನದ ಭಾಷೆಗಳಿಗಿಂತ ಸ್ಥಳೀಯ ಭಾಷೆಗಳಲ್ಲಿ ಹೆಚ್ಚು ನಿರರ್ಗಳತೆ ಮತ್ತು ಕೌಶಲ್ಯ ಹೊಂದಿರುವಾಗ ತಮ್ಮನ್ನು ತಾವು ವ್ಯಕ್ತಪಡಿಸಲು ವಿದ್ಯಾರ್ಥಿಗಳು ಸಮರ್ಥರಾಗಿರುವಾಗ, ಏನು ಕಲಿಕೆ ಆಗಿದೆ ಮತ್ತು ಯಾವ ವಿಷಯಗಳಲ್ಲಿ ಅವರಿಗೆ ಹೆಚ್ಚಿನ ಸಹಾಯ ಬೇಕು ಎಂದು ಶಿಕ್ಷಕರು ನಿಖರವಾಗಿ ಮೌಲ್ಯಮಾಪನ ಮಾಡಬಹುದು. ಜನರ ಸಾಮುದಾಯಿಕ ಜ್ಞಾನ– ಅವರ ಜೀವನಗಳಿಗೆ ಮಾಹಿತಿ ನೀಡಿ ಅರ್ಥಒದಗಿಸುವ ಜ್ಞಾನ – ಶಾಲಾವ್ಯವಸ್ಥೆಗೆ ಇದರ ಸೇರ್ಪಡೆಗೆ ಬೇಕಾದ ಸ್ಥಿತಿಗಳನ್ನು ಎಂಎಲ್ಇ ಸೃಷ್ಟಿಸುತ್ತದೆ. ತನ್ನ ಸ್ವಂತ ಸಾಂಸ್ಕೃತಿಕವಾಗಿ ಸಮಂಜಸ ಓದುವ ಪರಿಕರಗಳು ಮತ್ತು ಬೋಧನಾ ಸಾಮಗ್ರಿಗಳನ್ನು ಸ್ಥಳೀಯ ಬರಹಗಾರರು, ಚಿತ್ರಕಾರರು, ಸಾಂಸ್ಕೃತಿಕ ಗುಂಪುಗಳು ಮತ್ತು ಸಮುದಾಯದ ಇದರ ಹಕ್ಕುದಾರರ ಜೊತೆಗೆ ಸಮುದಾಯವು ಉತ್ಪಾದಿಸಲು ಎಂಎಲ್ಇ ಸಾಧ್ಯ ಮಾಡುತ್ತದೆ. ಶಾಲೆಯ ಭಾಷೆ ಮತ್ತು ಸಮುದಾಯದ ಭಾಷೆಯೇ ಅವರದ್ದೂ ಆದ್ದರಿಂದ, ತಮ್ಮ ಮಕ್ಕಳ ಶಾಲಾ ಶಿಕ್ಷಣದಲ್ಲಿ ಸಕ್ರಿಯ ಭಾಗವಹಿಸುವ ಪೋಷಕರನ್ನು ಸಹ ಎಂಎಲ್ಇ ಸಬಲಗೊಳಿಸುತ್ತದೆ. ಎಂಎಲ್ಇ ಸಮುದಾಯವನ್ನು ಶಾಲೆ ಮತ್ತು ಅದರ ಕಾರ್ಯಕ್ರಮಗಳ ಹತ್ತಿರ ತರುತ್ತದೆ". *@ (ರಿಕಾರ್ಡೋ ಮತ್ತು ನೊಲಾಸ್ಕೋ, ೨೦೦೬:೪)*

ಭಾಷಾ ಮತ್ತು ಶಿಕ್ಷಣ ತಜ್ಞರ ಅಭಿಪ್ರಾಯದಂತೆ ಮಗುವಿನ ಮಾತೃಭಾಷೆ ಶಿಕ್ಷಣದ ಮಾಧ್ಯಮ ಆಗಿಲ್ಲದಿದ್ದರೆ, ಮಗುವು ಅವನ/ಅವಳ ಹಲವು ವರ್ಷಗಳನ್ನು ಭಾಷೆ ಕಲಿಯುವುದರಲ್ಲೇ ದಂಡ ಮಾಡುತ್ತದೆ, ಏಕೆಂದರೆ ಈ ಮಾರ್ಗದಲ್ಲಿ **"… ಚಿಕ್ಕ ಕಲಿಯುವವರು ಮತ್ತು ಅವರ ಶಿಕ್ಷಕರು ಕಲಿಕೆಗೆ ಹೆಚ್ಚು ಮೂಲಭೂತವಾದ ವಿಜ್ಞಾನ, ಗಣಿತ ಮತ್ತು ಸಾಕ್ಷರತೆ ಮೇಲೆ ಗಮನ ಕೇಂದ್ರೀಕರಿಸದೆ, ಭಾಷೆಯ ಮೇಲೆ ಗಮನ ಕೇಂದ್ರೀಕರಿಸುತ್ತಾರೆ". ಮೂಲಭೂತ ವಿಜ್ಞಾನ ಮತ್ತು ಗಣಿತ, ಸಮಸ್ಯೆ ಬಿಡಿಸುವ ಕೌಶಲ್ಯಗಳು ಮತ್ತು ಯೋಚನಾ ಕೌಶಲಗಳನ್ನು ಕಲಿಯಲು ಎಲ್1 ಅಥವಾ ಮಾತೃಭಾಷೆ, ಅತ್ಯುತ್ತಮ ವಿಧಾನ".** *@ (ರಿಕಾರ್ಡೋ ಮತ್ತು ನೊಲಾಸ್ಕೋ, ೨೦೦೬:೧೧)*

ಮಾತೃಭಾಷಾ ಮಾಧ್ಯಮ ಶಿಕ್ಷಣದ ಮೂಲಕ ಮಾತ್ರ ಶಿಕ್ಷಣದಲ್ಲಿ ಯಶಸ್ಸು ಸಾಧ್ಯ ಎನ್ನುವ ಹೇಳಿಕೆಗೆ ವಿಶ್ವವ್ಯಾಪಿ ಸಂಶೋಧನೆ ಎಂದು ಪರಿಣತ ಅಭಿಪ್ರಾಯಗಳು ಒಂದು ನಿಖರ ಪುರಾವೆಯನ್ನು ಒದಗಿಸುತ್ತವೆ, ಎಂದು ನಾವು ಮೇಲಿನ ಅಂಶಗಳಿಂದ ಗ್ರಹಿಸಿದ್ದೇವೆ. ಆದರೆ, ಇಲ್ಲಿ, ಭಾರತದಲ್ಲಿ, ಭಾಷೆ ಮತ್ತು ಶಿಕ್ಷಣ ನೀತಿಗಳ ನಿಯಂತ್ರಣದಲ್ಲಿ ಇರುವ ವ್ಯಕ್ತಿಗಳು ಇಂಗ್ಲಿಷ್ ಮಾತ್ರ ಬೇಕೆಂಬ ಹಠದಿಂದ ತಮ್ಮ ಕಣ್ಣು–ಕಿವಿಗಳನ್ನು ಮುಚ್ಚಿಕೊಂಡಿದ್ದಾರೆ. ಅವರು ಭಾರತದ ಶಿಕ್ಷಣ, ಭಾಷೆ ಮತ್ತು ಸಂಸ್ಕೃತಿಯನ್ನು ಪರಿಹಾರವೇ ಇಲ್ಲದಂತೆ ಹಾಳು ಮಾಡುತ್ತಿದ್ದಾರೆ. ಮುಂಚೆಯೇ ಹೇಳಿದಂತೆ, ಈ ಬರಹದ ವಿನಮ್ರ ಗುರಿ, ಅವರ ಕಣ್ಣುಗಳಿಗೆ ಕಟ್ಟಿರುವ ಪಟ್ಟಿಗಳನ್ನು ಬಿಚ್ಚಿ, ಅವರ ಕಿವಿಗಳಲ್ಲಿ ತುಂಬಿರುವ ಗಟ್ಟಿಮೇಣವನ್ನು ಹೊರತೆಗೆಯುವುದೇ ಆಗಿದೆ.

ಮುಂದೆ ವಿವರಿಸಲಾಗಿರುವ ಅಂತಾರಾಷ್ಟ್ರೀಯ ಸಂಶೋಧನೆಯ ಪರಿಣಾಮಗಳು ಈ ಹೇಡಿತನದ, ಹುಂಬತನದ ಅಜ್ಞಾನವನ್ನು ಇನ್ನೂ ಹೆಚ್ಚು ಭೇದಿಸಲು ಹೆಚ್ಚಿನ ಸಹಾಯ ಮಾಡುತ್ತದೆ. ಈ ಸಂಶೋಧನೆಗಳ ಪ್ರಕಾರ ಶಿಕ್ಷಣದಲ್ಲಿ ಯಶಸ್ಸಿಗೆ

ಮಾತೃಭಾಷಾ ಮಾಧ್ಯಮ ಅವಶ್ಯಕ ಅಷ್ಟೇ ಅಲ್ಲ, ಅದು ಒಂದು ವಿದೇಶೀ ಭಾಷೆಯನ್ನು ಕಲಿಯಲೂ ಸಹ ಆ ವಿದೇಶೀ ಭಾಷೆಗಿಂತ ಹೆಚ್ಚು ಉಪಯುಕ್ತ ಎಂದು ಸ್ಪಷ್ಟವಾಗಿ ತೋರಿಸುತ್ತವೆ.

## III. ವಿದೇಶೀ ಭಾಷಾ ಕಲಿಕೆ ಮತ್ತು ಮಾತೃಭಾಷಾ ಮಾಧ್ಯಮ – ವಿದೇಶೀ ಭಾಷಾ ಮಾಧ್ಯಮ

ಯುನೆಸ್ಕೋದ ಒಂದು ಹೇಳಿಕೆಯಿಂದ ಪ್ರಾರಂಭಿಸುವುದು ಸೂಕ್ತ :

"ಭಾಷೆ ಮತ್ತು ಕಲಿಕೆಯ ಬಗ್ಗೆ ಕೆಲವು ಮಿಥ್ಯೆಗಳ ಒಂದು ಗುಂಪು ನಮ್ಮ ದಾರಿಗೆ ಅಡ್ಡವಾಗಿ ನಿಂತಿರುವಂತೆ ತೋರುತ್ತದೆ; ಮತ್ತು ಈ ಮಿಥ್ಯೆಗಳನ್ನು ಇರುವಂತೆಯೇ ಅನಾವರಣಗೊಳಿಸಿ, ಜನರ ಕಣ್ಣುಗಳನ್ನು ತೆರೆಸಬೇಕು. **ಇಂಥ ಒಂದು ಮಿಥ್ಯೆ ಎಂದರೆ– ಒಂದು ಎರಡನೇ (ಒದಿ–ವಿದೇಶೀ) ಭಾಷೆಯನ್ನು ಕಲಿಯಲು ಅತ್ಯುತ್ತಮ ರೀತಿ ಎಂದರೆ ಅದನ್ನು ಶಿಕ್ಷಣದ ಮಾಧ್ಯಮವನ್ನಾಗಿ ಮಾಡುವುದು.** (ವಾಸ್ತವವಾಗಿ, ಹೆಚ್ಚಿನ ಭಾಷೆಗಳನ್ನು ಅಧ್ಯಯನದ ವಿಷಯಗಳಾಗಿ ಕಲಿಯುವುದು ಸಾಮಾನ್ಯವಾಗಿ ಹೆಚ್ಚು ಪರಿಣಾಮಕಾರಿ). **ಇನ್ನೊಂದು ಮಿಥ್ಯೆ – ಎರಡನೇ ಭಾಷೆಯನ್ನು ಕಲಿಯಲು ನೀವು ಎಷ್ಟು ಬೇಗ ಸಾಧ್ಯವೋ ಅಷ್ಟು ಬೇಗ ಪ್ರಾರಂಭಿಸಬೇಕು.** (ಮುಂಚೆ ಪ್ರಾರಂಭಿಸುವುದು ಕಲಿಯುವವರಿಗೆ ಒಂದು ಚೆನ್ನಾದ ಉಚ್ಚಾರಣೆಯ ಶೈಲಿ ಎಂದರೆ "ಆ್ಯಕ್ಸೆಂಟ್" ಹೊಂದಲು ಸಹಾಯ ಮಾಡಬಹುದು, ಆದರೆ, ಹೀಗಿಲ್ಲದಿದ್ದರೆ, ಚೆನ್ನಾಗಿ ಅಭಿವೃದ್ಧಿ ಹೊಂದಿದ 1ನೇ ಭಾಷೆ ಇರುವ ಕಲಿಯುವವರಿಗೆ ಅನುಕೂಲ ದಕ್ಕುತ್ತದೆ). **ಮೂರನೇ ಮಿಥ್ಯೆ – ಎರಡನೇ ಭಾಷೆ ಕಲಿಯಲು ಮನೆಯ (ದೇಶೀಯ, ಮಾತೃಭಾಷೆ) ಅಡ್ಡಿಪಡಿಸುತ್ತದೆ.** (ಒಂದನೇ ಭಾಷೆಯಲ್ಲಿ ಸುಭದ್ರ ಅಡಿಪಾಯ ಕಟ್ಟುವುದು ಹೆಚ್ಚುವರಿ ಭಾಷೆಗಳ ಉತ್ತಮ ಕಲಿಕೆಯ ಪರಿಣಾಮ ಉಂಟುಮಾಡುತ್ತದೆ). ಸುಸ್ಪಷ್ಟವಾಗಿ, ಈ ಮಿಥ್ಯೆಗಳು ನಿಜಕ್ಕಿಂತ ಹೆಚ್ಚು ಸುಳ್ಳಾಗಿದ್ದು, ಆದರೂ ಸಹ, ಇತರ ಭಾಷೆಗಳನ್ನು ಮಾತನಾಡುವವರು ಪ್ರಬಲ ಅಥವಾ ಅಧಿಕೃತ ಭಾಷೆಗಳನ್ನು ಹೇಗೆ ಕಲಿಯಬೇಕು ಎನ್ನುವುದರ ಬಗ್ಗೆ ನೀತಿ ರೂಪಿಸುವವರು ಯೋಚನೆಯನ್ನು ಇವು ಪ್ರಭಾವಬೀರಿ, ನಡೆಸುತ್ತವೆ." *@ (ಯುನೆಸ್ಕೋ, ೨೦೦೮:೧೨)*

ಈ ಹೇಳಿಕೆಯು ಎಲ್ಲಾ ಖಂಡಗಳ ಮೇಲೆ ಹರಡಿರುವ 12 ದೇಶಗಳಲ್ಲಿ ನಡೆಸಲಾದ ಅಧ್ಯಯನಗಳನ್ನು ಆಧರಿಸಿದೆ. ಈ ಅಧ್ಯಯನದ ವ್ಯಾಪ್ತಿಯಲ್ಲಿ ಭಾರತವೂ ಸೇರಿತ್ತು. ಅಧ್ಯಯನಕ್ಕೆ ಹಣಕಾಸು ಒದಗಿಸಿದ್ದು ವಿಶ್ವಬ್ಯಾಂಕ್, ಇಂಗ್ಲಿಷ್ ವಿರೋಧಿ ಆಗಿರಲಿಲ್ಲ.

ಸ್ವೀಡನ್‌ಗೆ ವಲಸೆ ಹೋದ ಫಿನ್ನಿಶ್ ಮಕ್ಕಳ ಬಗ್ಗೆ ಇರುವ ಇದೇ ರೀತಿಯ ಇನ್ನೊಂದು ಅಧ್ಯಯನ. ಈ ಅಧ್ಯಯನ ತೋರಿಸಿದ್ದು, "ಭಾರಿ ಪ್ರಮಾಣದಲ್ಲಿ, ಫಿನ್‌ಲ್ಯಾಂಡ್‌ನಲ್ಲಿ ಹಲವು ವರ್ಷ ಶಾಲೆಗೆ ಹೋದ ಪರಿಣಾಮವಾಗಿ ಒಬ್ಬ ವಿದ್ಯಾರ್ಥಿಗೆ ಫಿನ್ನಿಶ್ ಚೆನ್ನಾಗಿ ಗೊತ್ತಿದ್ದಷ್ಟೂ, ಆತನ ಸ್ವೀಡಿಶ್ ಕಲಿಕೆ ಹೆಚ್ಚು ಉತ್ತಮವಾಗಿತ್ತು. ಒಟ್ಟಿಗೆ ಬೆಳೆದ ಮಕ್ಕಳ ಭಾಷಾ ಸಾಮರ್ಥ್ಯಗಳ ಒಂದು ಪರೀಕ್ಷೆಯಲ್ಲಿ, ಅವರು 10ನೇ ವಯಸ್ಸಿನಲ್ಲಿ ಫಿನ್‌ಲೆಂಡ್‌ನಿಂದ ಹೊರಟಿದ್ದಾಗ, ಅವರು ಹೆಚ್ಚು–ಕಮ್ಮಿ ಸಾಮಾನ್ಯ ಫಿನ್ನಿಶ್ ಮಟ್ಟ ಉಳಿಸಿಕೊಂಡು, ಸ್ವೀಡಿಶ್ ವಿದ್ಯಾರ್ಥಿಗಳ ಮಟ್ಟದಲ್ಲೇ ಸ್ವೀಡಿಶ್ ಭಾಷೆಯ ಮಟ್ಟ ಉಳಿಸಿಕೊಂಡಿದ್ದರು. ಆರು ವರ್ಷದಲ್ಲಿ ಹೊರಟ ಮಕ್ಕಳು, ಅಥವಾ ಸ್ವೀಡನ್‌ನಲ್ಲಿ ಹುಟ್ಟಿದವರು, ಇಷ್ಟು ಚೆನ್ನಾಗಿ ಕಲಿಯಲಿಲ್ಲ. ಅವರ ಸ್ವೀಡಿಶ್ ಭಾಷಾ ಅಭಿವೃದ್ಧಿ ಸಾಮಾನ್ಯವಾಗಿ 12ನೇ ವಯಸ್ಸಿಗೆ ನಿಲ್ಲುತ್ತಿದ್ದು, ಇದಕ್ಕೆ ಕಾರಣ ಮಾತೃಭಾಷೆಯಲ್ಲಿ ಅವರಿಗೆ ಗಟ್ಟಿ ಅಡಿಪಾಯ ಇಲ್ಲದ್ದರಿಂದ ಎಂದು ಸ್ಪಷ್ಟ." *@ (ಪಾಲ್‌ಸ್ಟನ್, ೧೯೭೭:೯೨-೯೩)*

ಹೀಗಾಗಿ, ಮಾತೃಭಾಷಾ ಮಾಧ್ಯಮದ ಮೂಲಕ ಓದುವುದರಿಂದ ವಿದೇಶಿ ಭಾಷೆಗಳ ಕಲಿಕೆ ಹೆಚ್ಚು ಸುಲಭ ಎನ್ನುವುದು ಸುಸ್ಪಷ್ಟ. ಈ ಮುಂದಿನ ಹೇಳಿಕೆ ಇದು ಹೇಗೆ ಎನ್ನುವುದಕ್ಕೆ ವಿವರಣೆ ನೀಡುತ್ತದೆ:

"ದೇಶೀ ಭಾಷೆಯ ಪಾತ್ರವನ್ನು ವಿದೇಶಿ ಭಾಷೆಯ ಕಲಿಕೆ ಮತ್ತು ಬೋಧನೆಯಲ್ಲಿ ಪ್ರಮುಖ ಸಂಪನ್ಮೂಲ ಎಂದು ನಾವು ಮರು–ಸೂತ್ರೀಕರಿಸಲೇಬೇಕು, ಎಂದು ಬುಟ್ಜ್‌ಕಾಮ್ ಆಗ್ರಹಿಸುತ್ತಾರೆ. ಮಕ್ಕಳು ತಮ್ಮ ಮಾತೃಭಾಷೆಯ ಒಳಕ್ಕೆ ಬೆಳೆದಂತೆ ಅವರು : (1) ತಮ್ಮ ಪ್ರಪಂಚವನ್ನು ಪರಿಕಲ್ಪಿಸಿಕೊಳ್ಳುವುದನ್ನು ಅವರು ಕಲಿತಿರುತ್ತಾರೆ ಮತ್ತು ಭಾಷೆಯ ಸಾಂಕೇತಿಕ ಕಾರ್ಯವನ್ನು ಸಂಪೂರ್ಣವಾಗಿ ಗ್ರಹಿಸಿರುತ್ತಾರೆ; (2) ಅವರು ಸಂವಹನ ಮಾಡಲು ಕಲಿತಿರುತ್ತಾರೆ; (3) ಅವರು ಮಾತನಾಡುವುದು ಮತ್ತು ತಮ್ಮ ಧ್ವನಿಯನ್ನು ಉಪಯೋಗಿಸಲು ಕಲಿತಿರುತ್ತಾರೆ; (4) ಅವರು ವ್ಯಾಕರಣವನ್ನು ಅಂತರ್ಯದಿಂದ ಅರ್ಥೈಸುವುದನ್ನು ಪಡೆದುಕೊಂಡು, ಭಾಷೆಯ ಅನೇಕ ಸೂಕ್ಷ್ಮ ಅಂಶಗಳ ಬಗ್ಗೆ ಅರಿವು ಮೂಡಿಸಿಕೊಂಡಿದ್ದಾರೆ ; (5) ಅವರು ಓದುವುದು ಮತ್ತು ಬರೆಯುವ ದ್ವಿತೀಯ ಕೌಶಲ್ಯಗಳನ್ನು ಬೆಳೆಸಿಕೊಂಡಿದ್ದಾರೆ. ಆದ್ದರಿಂದ, ಜನರು ವಿದೇಶಿ ಭಾಷೆಯ ಕಲಿಕೆಗೆ ತರುವ ಅತಿ ಉನ್ನತ ಆಸ್ತಿ ಎಂದರೆ ಮಾತೃಭಾಷೆ. ಮೊದಲನೆಯದಾಗಿ, ಮಾತೃಭಾಷೆಯು ಒಂದು ಅತ್ಯವಶ್ಯಕ ಭಾಷಾ ಆರ್ಜನೆಯ ಬೆಂಬಲ ವ್ಯವಸ್ಥೆ ನೀಡಿ, ಬೋಧನೆಯನ್ನು ಸಾಧ್ಯ ಮಾಡುತ್ತದೆ."
*@ (ವಿಕಿಪೀಡಿಯಾ).*

"ಯಶಸ್ವೀ ಕಲಿಕೆ ಸಾಧಿಸುವವರು ಮಾತೃಭಾಷೆಯ ಮೂಲಕ ಆ ಮೊದಲೇ ಸಂಗ್ರಹಿಸಿರುವ ಅಪಾರ ಮಟ್ಟದ ಭಾಷಾ ಕೌಶಲ್ಯಗಳು ಮತ್ತು ಪ್ರಾಪಂಚಿಕ ಜ್ಞಾನದ ಬಂಡವಾಳವನ್ನು ಸದುಪಯೋಗಪಡಿಸಿಕೊಳ್ಳುತ್ತಾರೆ. ಅವರು ಹೆಚ್ಚಿನಂಶ, ತಮ್ಮ ಪ್ರಪಂಚವನ್ನು ಹೊಸಭಾಷೆಯಲ್ಲಿ ಮರು–ಪರಿಕಲ್ಪಿಸಿಕೊಳ್ಳಬೇಕಾಗಿಲ್ಲ. ಅವರು ಎಲ್1 ನ್ನು ಅದರ ಜೊತೆ ಹೊಂದಿಕೊಂಡಿರುವ ವಾಚನಾ ಕೌಶಲ್ಯಗಳು ಮತ್ತು ಸಮತೋಲಿತ, ಗಂಭೀರ ಜ್ಞಾನಗಳ ಜೊತೆ ಪಡೆದಿರುತ್ತಾರೆ ಮತ್ತು ಇವು ಗಮ್ಯ ಭಾಷೆಯ ವ್ಯವಸ್ಥೆಯ ಒಳಕ್ಕೆ ಅಳವಡಿಸಿಕೊಳ್ಳಲು ನೇರವಾಗಿ ಲಭ್ಯ ಇರುತ್ತವೆ. ಉದಾಹರಣೆಗೆ, ಕೋರಿಕೆಗಳು, ಹಾರೈಕೆಗಳು ಅಥವಾ ಎಚ್ಚರಿಕೆಗಳು ಹೇಳಿಕೆಗಳಂತೆ ಕಾಣಬಹುದು, ಎಂದು ಅವರಿಗೆ ಹೇಳಿಕೊಡುವ ಅವಶ್ಯಕತೆ ಇಲ್ಲ. ಅಲ್ಲದೆ, ಎಲ್1 ವ್ಯಾಕರಣದ ಪಥ–ಮುರಿಯುವ ಶಕ್ತಿಯು ಎರಡೂ ಭಾಷೆಗಳು ಒಂದೇ ರೀತಿಯ ವ್ಯಾಕರಣ ವೈಶಿಷ್ಟ್ಯಗಳನ್ನು ಹೊಂದಿವೆ ಎನ್ನುವ ವಾಸ್ತವಾಂಶದ ಮೇಲೆ ಅವಲಂಬಿಸಿಲ್ಲ. ಇದಕ್ಕೆ ಕಾರಣ ಏನೆಂದರೆ, ಭಾಷೆಗಳು ಇದನ್ನು ಹೇಗೆ ಸಾಧಿಸಿದರೂ ಸಹ, ಹೊಂದಿರುವುದು, ಸಂಖ್ಯೆ, ಪ್ರತಿನಿಧಿ, ಉಪಕರಣ, ನಕಾರ, ಕಾರಣ, ಸ್ಥಿತಿ, ಋಣ, ಇತ್ಯಾದಿ ಅಮೂರ್ತ ಪರಿಕಲ್ಪನೆಗಳನ್ನು ವ್ಯಕ್ತಪಡಿಸುವ ಸಾಧನಗಳನ್ನು ಎಲ್ಲಾ ಭಾಷೆಗಳೂ ಕ್ರಮೇಣ ಅಭಿವೃದ್ಧಿಪಡಿಸಿಕೊಂಡಿವೆ; ಒಂದು ಸಹಜ ಭಾಷೆ ಇತರ ಭಾಷೆಗಳ ವ್ಯಾಕರಣಗಳಿಗೆ ಬಾಗಿಲು ತೆರೆಯಲು ಸಾಕು. ಏಕೆಂದರೆ, ಎಲ್ಲಾ ಭಾಷೆಗಳೂ ಒಂದೇ ಪರಿಕಲ್ಪನಾ ಬಟ್ಟೆಯಿಂದ ಹೊಲೆದಂಥವು. ಆಳವಾದ ಅರ್ಥದಲ್ಲಿ, ನಾವು ಭಾಷೆಯನ್ನು ಕಲಿಯುವುದು ಕೇವಲ ಒಂದೇ ಬಾರಿ. *@ http://en.wikipedia.org/wiki/Wolfgang_butzkamm*

ಇದುವರೆಗೂ ವಿವರಿಸಲಾಗಿರುವ ವಾಸ್ತವಾಂಶಗಳು ಭಾರತೀಯ ನೀತಿ ರೂಪಿಸುವವರ ಕಣ್ಣುಗಳಿಗೆ ಕಟ್ಟಿರುವ ಬಟ್ಟೆ ತೆಗೆದು, ಕಿವಿಗಳಲ್ಲಿ ತುಂಬಿರುವ ಕಿವುಡು ಉಂಟಾಗಿಸುವ ಮೇಣವನ್ನು ಹೊರತೆಗೆಯಲು ಸಾಕಾಗಬೇಕು. ಇಷ್ಟಾದರೂ ಸಹ, ಭಾಷೆಗೆ ಸಂಬಂಧಿಸಿದಂತೆ ಪ್ರಪಂಚದ ಇತರ ಭಾಗಗಳಲ್ಲಿ ಏನಾಗುತ್ತದೆ ಎಂದು ಗಮನಿಸುವುದರಲ್ಲಿ ಯಾವ ಹಾನಿಯೂ ಇಲ್ಲ.

ವಾಸ್ತವವಾಗಿ, ಎಲ್ಲೆಲ್ಲಿ ಇಂಗ್ಲಿಷ್ ಶಿಕ್ಷಣದ ಮಾಧ್ಯಮ ಆಗಿದ್ದಿತೋ, ಅಲ್ಲಿ ಅದು ವಿದೇಶೀ ಭಾಷೆ ಆಗಿದ್ದರೂ ಸಹ, ಅದನ್ನು ಹಂತಗಳಲ್ಲಿ ಹೊರಗೆ ಕಳುಹಿಸಲಾಗಿದೆ, ಅಥವಾ ದಿನ ಕಳೆದಂತೆ ಕನಿಷ್ಠ ಕಡಿಮೆ ಆಗುತ್ತಾ ಹೋಗುತ್ತಿದೆ. ಇದಕ್ಕೆ ಪುರಾವೆಯಾಗಿ ಕೆಲವು ಉದಾಹರಣೆಗಳು ಸಾಕಾಗಬಹುದು.

2007ರಲ್ಲಿ ಯುಗಾಂಡಾ ತೆಗೆದುಕೊಂಡ ನಿರ್ಧಾರ. ಮೊದಲ ಮೂರು ವರ್ಷಗಳಲ್ಲಿ ಮಾತೃಭಾಷೆಗಳನ್ನು ಶಿಕ್ಷಣದ ಮಾಧ್ಯಮವಾಗಿ, ಮತ್ತು ಇಂಗ್ಲಿಷ್‌ನ್ನು ಒಂದು ವಿಷಯವಾಗಿ ಬೋಧಿಸಬೇಕು. ಇದು ಆ ದೇಶಕ್ಕೆ ಯಶಸ್ಸನ್ನು ಸಹಾ ತಂದು ಕೊಟ್ಟಿದೆ. 2008 ರಲ್ಲಿ ನಡೆಸಿದ ಒಂದು ಮೌಲ್ಯಮಾಪನವು ಹೊಸನೀತಿಯು ಸಾಕ್ಷರತೆ ಉತ್ತಮಗೊಳ್ಳುವದರಲ್ಲಿ ಪಾತ್ರವಹಿಸಿತು ಎಂದು ತೋರಿಸಿತು.

ಯುಗಾಂಡಾದಲ್ಲಿ 52 ಭಾಷಾ ಗುಂಪುಗಳು ಇವೆ ಎಂದು ಇಲ್ಲಿ ವಿಶೇಷವಾಗಿ ಹೇಳಬೇಕು. ಯುಗಾಂಡಾದಲ್ಲಿ ಆದ ಬದಲಾವಣೆಗೆ ಆಧಾರ, ಒಬ್ಬ ವಿದ್ಯಾರ್ಥಿ ತನ್ನ ಮಾತೃಭಾಷೆಯಲ್ಲಿ ಉತ್ತಮ ಅಡಿಪಾಯ ಹೊಂದಿದ್ದರೆ ಅವನು/ಅವಳು ಒಂದು ವಿದೇಶೀ ಭಾಷೆಯನ್ನು ಕಲಿಯುವುದು ಸುಲಭ ಎನ್ನುವ ಅಭಿಪ್ರಾಯ. ಈ ಹೊಸ ನೀತಿಗೆ ಮೊದಲು, ಯುಗಾಂಡಾದಲ್ಲಿ ಶಾಲಾ ಶಿಕ್ಷಣ ಮೊದಲಿನಿಂದಲೇ ಇಂಗ್ಲಿಷ್ ಮಾಧ್ಯಮದಲ್ಲಿ ಇರುತ್ತಿತ್ತು. *(ಈ ವಾಸ್ತವಾಂಶಗಳಿಗಾಗಿ ಕವುಮಾ, 2009 ನೋಡಿರಿ).*

ಮಲೇಷಿಯ ದೇಶವು 2009ರಲ್ಲಿ ಗಣಿತ ಮತ್ತು ವಿಜ್ಞಾನವನ್ನು ರಾಷ್ಟ್ರೀಯ ಶಾಲೆಗಳಲ್ಲಿ ಬಹಾಸ ಮಲೇಷಿಯಾದಲ್ಲಿ ಮತ್ತು ಸ್ಥಳೀಯ ಶಾಲೆಗಳಲ್ಲಿ ಚೈನೀಸ್ ಮತ್ತು ತಮಿಳು ಭಾಷೆಗಳಲ್ಲಿ ಬೋಧಿಸಬೇಕು ಎಂದು ನಿರ್ಧರಿಸಿತು.

ತಮಿಳರಿಗೆ ತಮಿಳಿನ ಮಾಧ್ಯಮದಲ್ಲಿ ಬೋಧಿಸುವುದು ಸರಿ ಎಂದು ಮಲೇಶಿಯಾದಲ್ಲಿ ಅಂದುಕೊಂಡರೆ, ಇಲ್ಲಿ ಭಾರತದಲ್ಲಿ ಅದೊಂದು ಅಪರಾಧ ಎಂದೇ ಪರಿಗಣಿಸಲಾಗುತ್ತಿದೆ. ಭಾರತೀಯ ನೀತಿ ರೂಪಿಸುವವರ ಅನಕ್ಷರತೆ ಮತ್ತು ಅವಿವೇಕಕ್ಕೆ ಇದಕ್ಕಿಂತ ಉತ್ತಮ ಭಾಷ್ಯ ಬೇಕಾಗಿಲ್ಲ. ಪಂಜಾಬಿನಲ್ಲಿ ಒಂದು ಗಾದೆಯ ಪ್ರಕಾರ, "ಜ್ಞಾನ ಇಲ್ಲದೆ, ಬಾವಿಗಳೂ ಒಣಗುತ್ತವೆ." ಅದರ ಬಗ್ಗೆ ನಮಗೆ ಹೆಚ್ಚು ತಿಳಿದಿಲ್ಲದೇ ಇದ್ದರೂ ಸಹ, ಖಂಡಿತವಾಗಿಯೂ ಇಂಗ್ಲಿಷ್ ಸೋಂಕು ತಗುಲಿರುವ ಭಾರತೀಯ ತಲೆಗಳು ಖಾಲಿ ಆಗಿವೆ. ಏನೇ ಆಗಲಿ, ಇಲ್ಲಿ ಇನ್ನಷ್ಟು ಪುರಾವೆಗಳನ್ನು ಗಮನಿಸುವುದರಿಂದ ಯಾರಿಗೂ ಏನೂ ಹಾನಿ ಇಲ್ಲ.

"ಇತ್ತೀಚಿನ ವರ್ಷಗಳಲ್ಲಿ ನ್ಯೂಜಿಲೆಂಡ್ ಮತ್ತು ಬ್ರಿಟನ್ ತಮ್ಮ ಸ್ಥಳೀಯ ಅಲ್ಪಸಂಖ್ಯಾತ ಭಾಷೆಗಳಿಗೆ (ವಲಸಿಗ ಭಾಷೆಗಳಿಗೆ ಅಲ್ಲ) ಹೆಚ್ಚಿನ ಮಾನ್ಯತೆ ತೋರಿಸಿದ್ದಾರೆ. ಮತ್ತೆ ಇದು ಶಾಲೆಗಳಲ್ಲಿ ಅವುಗಳ ಅನುಷ್ಠಾನದಲ್ಲಿಯೂ ಕಂಡುಬರುತ್ತದೆ. ಮಾವೊರಿ ಭಾಷೆ ಮತ್ತು ಸಂಸ್ಕೃತಿಯ ಬಗ್ಗೆ ನ್ಯೂಜಿಲೆಂಡ್‌ನ ನೀತಿಯ ಇತ್ತೀಚಿನ ಚರಿತ್ರೆಯನ್ನು ಎಸ್.ಮೇ ಅವರು ಒಂದು ಆಶಾದಾಯಕ ದೃಷ್ಟಿಕೋನದಿಂದ (PP.21-41) ನೋಡಿದ್ದಾರೆ. ಹೊಸದಾಗಿ ಸಾಂಸ್ಥಿಕಗೊಳಿಸಲಾದ, ಮಾವೊರಿ ಶಿಕ್ಷಣ ಮಾಧ್ಯಮ ಇರುವ ಮಾವೊರಿ ಪ್ರಾಥಮಿಕ ಶಾಲೆಗಳು (ಕುರಾ–ಕೌಪಾಪಾ) ಮೊದಲ ಮೌಲ್ಯಮಾಪನಗಳು ಸಲಹೆ ಮಾಡುವುದು, ಮಕ್ಕಳ ಶೈಕ್ಷಣಿಕ ಪ್ರಗತಿಯು, ಮುಖ್ಯವಾಹಿನಿಯಲ್ಲಿರುವ ಅವರ ಸಮವಯಸ್ಕರ ಜೊತೆ ಹೋಲಿಸುವಂತೆ ಇದ್ದು, ಇದೇ ಸಮಯದಲ್ಲಿ ದ್ವಿಭಾಷಿಕತೆಯ ಹೆಚ್ಚಿನ ಅನುಕೂಲ ನೀಡುತ್ತಿದೆ (ಪುಟ35). ಹಾಂಗ್‌ಕಾಂಗ್ ಬಗ್ಗೆ ಹೇಳುವುದಾದರೆ, ಪುಂಟೋಂಗ್‌ಹುವಾದ ಉಪಯೋಗದಲ್ಲಿ ಹೆಚ್ಚಳ ಇದ್ದು, ಅದನ್ನು ಅಧಿಕವಾಗಿ ಬೋಧಿಸಲಾಗುವ ಶಾಲಾ ವಿಷಯ ಎಂದೂ ಸಹ ಪರಿಚಯಿಸಲಾಗಿದ್ದು, ಸ್ಥಳೀಯ ಕ್ಯಾಂಟೋನೀಸ್ ಇಂಗ್ಲಿಷ್‌ನ ಜೊತೆ ಈಗಲೂ ಶಿಕ್ಷಣ ಮಾಧ್ಯಮವಾಗಿ ಉಳಿದಿದೆ. ಇದಕ್ಕೆ ವಿರುದ್ಧವಾಗಿ, ಮಲೇಷಿಯಾ ದೇಶವು ಇಂಗ್ಲಿಷ್‌ನ ಅಂತಸ್ತು ಮತ್ತು ಕಾರ್ಯವನ್ನು ಕಡಿವಾಣ ಹಾಕಿ, ಅದರ ಬದಲು ಬಹಾಸ ಮಲೇಷಿಯಾ ಭಾಷೆಯನ್ನು ದೇಶದ ಏಕೈಕ ಅಧಿಕೃತ ಭಾಷೆ, ಮತ್ತು ಸಾರ್ವಜನಿಕ ಶಾಲೆಗಳು ಮತ್ತು ವಿಶ್ವವಿದ್ಯಾನಿಲಯಗಳಲ್ಲಿ ಏಕೈಕ ಶಿಕ್ಷಣ ಮಾಧ್ಯಮ ಎಂದು ಆದೇಶಿಸಿದೆ. (ಎಸ್.ಕೌರ್‌ಗಿಲ್, ಪುಟ 135–152)." *@ (ಆಮ್ಮನ್, 2004)*

ಹೀಗೆ, ನಿನ್ನೆಯ ವರ್ಷಗಳ ಇಂಗ್ಲಿಷ್ ಸೋಂಕಿತ ರಾಷ್ಟ್ರಗಳು ಅದಕ್ಕೆ ವಿದಾಯ ಹೇಳುತ್ತಿವೆ ಎನ್ನುವುದು ಬಹಳ ಸ್ಪಷ್ಟವಾಗಿದೆ. ಇದಕ್ಕೆ ಕಾರಣ ಯಾರೂ ಅಜ್ಞಾನದ ಸ್ನೇಹಿತರಾಗಲು ಇಷ್ಟಪಡುವುದಿಲ್ಲ ಎಂದು ತೋರುತ್ತದೆ. (ಇದಕ್ಕೆ ನಾವು ಭಾರತೀಯರು, ಮಾನಸಿಕ ದಾಸ್ಯಕ್ಕೆ ಅತಿ ಹೆಚ್ಚು ಒಗ್ಗಿಕೊಂಡು ಇರುವವರು, ಮತ್ತು ನೀತಿ ರೂಪಿಸುವುದರಲ್ಲಿ ಢೋಂಗಿತನ ತೋರುವವರು ಹೊರತಾಗಿದ್ದೇವೆ).

ಹಾಗಾದರೆ, ಭಾರತದಲ್ಲಿ ಇದು ಏಕೆ ಹೀಗಾಗುತ್ತಿದೆ ? ಇದಕ್ಕೆ ನಿಜವಾದ ಕಾರಣ ಭಾರತೀಯ ನಿಯೋ ಅಥವಾ ಸುಳ್ಳು – ಮನುವಾದ; ಭಾರತೀಯ ಎಲೈಟ್, ಎಂದರೆ, ತಮ್ಮನ್ನು ತಾವು ದೇಶದ ಪ್ರಗತಿಗೆ ಅವಶ್ಯಕ ಎಂದುಕೊಂಡಿರುವ ಢೋಂಗಿಜನ, ಎಲ್ಲರನ್ನೂ ಲೂಟಿಮಾಡಿ, ಇಂಗ್ಲಿಷ್ ಭಾಷೆಯ ಉಪಕರಣ (ಆಯುಧದ) ಮೂಲಕ ಭಾರತೀಯರನ್ನು ಎಲ್ಲವುದರಿಂದ ವಂಚಿತರಾಗಿ ಮಾಡುವ ಸಂಚು ನಡೆಸಿದ್ದಾರೆ. ಆದ್ದರಿಂದ, ಈ ಡಿಜಿಟಲ್ ಯುಗದಲ್ಲಿ ಇಂಥ ಅಪಾಯಕಾರಿ ನಿಯೋ ಮನುವಾದವನ್ನು ಬೆಂಬಲಿಸಿ, ಆಧಾರ ನೀಡುವ ಆದರ್ಶವಾದಿ ಅಡಿಪಾಯಗಳನ್ನು ನಾವು ಕಿತ್ತೊಗೆಯಬೇಕು. ಈ ಆಧಾರಗಳೆಂದರೆ ಕೆಲವು ಮಿಥ್ಯೆಗಳು. ಸ್ಟಾಕ್‌ಹೋಮ್ (ಸ್ವೀಡನ್) ವಿಶ್ವವಿದ್ಯಾನಿಲಯದ ಒಂದು ವರದಿ ಇವುಗಳ ಮುಖವಾಡವನ್ನು ಚೆನ್ನಾಗಿ ಕಿತ್ತೊಗೆಯಿತು. (ಬೆನ್‌ಸನ್ 2005 ನೋಡಿರಿ). ಈ ಮಿಥ್ಯೆಗಳಲ್ಲಿ ಕೆಲವನ್ನು ಮುಂದೆ ವಿವರಿಸಿದೆ.

## III.2. ಭಾಷೆಯನ್ನು ಸುತ್ತ ಮುತ್ತಿಕೊಂಡಿರುವ ಕೆಲವು ಮಿಥ್ಯೆಗಳು

**III.2.1 "ಒಂದು ದೇಶ– ಒಂದು ಭಾಷೆ ಮಿಥ್ಯೆ.** ಒಂದು ರಾಷ್ಟ್ರ–ರಾಜ್ಯಕ್ಕೆ ಒಂದು ಒಗ್ಗೂಡಿಸುವ ಭಾಷೆ ಬೇಕು ಎನ್ನುವ ವಸಾಹತುಶಾಹಿ ಪರಿಕಲ್ಪನೆ ಪ್ರಪಂಚದ ಅನೇಕ ಕಡೆ ನೀತಿರೂಪಕರ ಮೇಲೆ ಪ್ರಭಾವ ಬೀರಿದೆ, ಆದರೂ ಒಂದು "ತಟಸ್ಥ" ವಿದೇಶೀ ಭಾಷೆಯ ಹೇರಿಕೆ ಒಕ್ಕೂಟದಲ್ಲಿ ಪರಿಣಮಿಸಿಲ್ಲ, ಜೊತೆಗೆ ಹೋಲಿಕೆಯಲ್ಲಿ ಏಕಭಾಷಾ ದೇಶಗಳಾದ ಸೊಮಾಲಿಯಾ, ಬುರುಂಡಿ ಅಥವಾ ರ್‍ವಾಂಡಾಗಳಿಗೆ ಸ್ಥಿರತೆಯ ಖಾತರಿಯೇನೂ ಸಿಕ್ಕಿಲ್ಲ. ವಾಸ್ತವವಾಗಿ, ಬಾಂಗ್ಲಾ ದೇಶ, ಪಾಕಿಸ್ತಾನ, ಮ್ಯಾನ್‌ಮಾರ್ ಮತ್ತು ಶ್ರೀಲಂಕಾಗಳಂಥ ದೇಶಗಳಲ್ಲಿ ಸಮುದಾಯೀ ಭಾಷಿಕ ವೈವಿದ್ಯತೆಯನ್ನು ಒಪ್ಪಿಕೊಳ್ಳಲು ಸರ್ಕಾರದ ವೈಫಲ್ಯವು ಪ್ರಮುಖ ಅಸ್ಥಿರತಾ ಶಕ್ತಿಗಳಾಗಿವೆ (ಓವೇನ್ ೨೦೦೩)." *@( ಬೆನ್‌ಸನ್, ೨೦೦೯)*

**III.2.2 "ಸ್ಥಳೀಯ ಭಾಷೆಗಳಿಗೆ ಆಧುನಿಕ ಪರಿಕಲ್ಪನೆಗಳನ್ನು ವ್ಯಕ್ತಪಡಿಸಲು ಆಗುವುದಿಲ್ಲ ಎನ್ನುವ ಮಿಥ್ಯೆ.** ಇತರರಿಗೆ ಹೋಲಿಸಿದಂತೆ ಯೂರೋಪಿಯನ್ ಭಾಷೆಗಳ ಭಾವಿಸಿದ ಆಂತರಿಕ ಮೌಲ್ಯ ಎನ್ನುವುದು ಮತ್ತೊಂದು ವಸಾಹತುಶಾಹಿ ಪರಿಕಲ್ಪನೆ, **ಆದರೆ, ಎಲ್ಲಾ ಮಾನವ ಭಾಷೆಗಳಿಗೂ ತಮ್ಮ ಭಾಷಿಕರ ಯೋಚನೆಗಳನ್ನು ವ್ಯಕ್ತಪಡಿಸಲು ಸಮಾನ ಸಾಮರ್ಥ್ಯ ಇದೆ, ಮತ್ತು ಅವಶ್ಯಕ ಇದ್ದಾಗ ಹೊಸ ನಿಯಮಗಳು ಮತ್ತು ಚೌಕಟ್ಟುಗಳನ್ನು ಅಭಿವೃದ್ಧಿಪಡಿಸಬಲ್ಲವು. ಲಿಯೋಪೋಲ್ಡ್ ಸೆಂಘೋರ್ ಒಮ್ಮೆ ಐನ್‌ಸ್ಟೈನ್‌ರ ಸಾಪೇಕ್ಷ ಸಿದ್ಧಾಂತವನ್ನು ಸೆನೆಗಲ್ ದೇಶದ ಭಾಷೆಯಾದ ವೊಲೋಫ್‌ಗೆ ಭಾಷಾಂತರ ಮಾಡಿ, ಇದನ್ನು ನಿರೂಪಿಸಿದ್ದರು.** ಬರಹ ಅಥವಾ ಪ್ರಕಟಣೆಗಳ ಮೂಲಕ, ಚಾರಿತ್ರಿಕವಾಗಿ, ಯಾವ ಭಾಷೆಗಳು "ಇಂಟೆಲೆಕ್ಚುಯಲೈಜೇಷನ್" ಅಥವಾ ಅಭಿವೃದ್ಧಿಗೆ ಆಯ್ಕೆಯಾಗಿವೆ ಎನ್ನುವುದರಲ್ಲಿ ವ್ಯತ್ಯಾಸ ಅಡಗಿದೆ. (ಅಲೆಕ್ಸಾಂಡರ್, 2003), *@( ಬೆನ್‌ಸನ್, ೨೦೦೯)*

ವಾಕ್ಯರಚನೆಯ ವಿಷಯದಲ್ಲಿ ಯಾವ ಭಾಷೆಯನ್ನೂ ಸಹ ಶ್ರೀಮಂತ ಅಥವಾ ಬಡವ ಎಂದು ಹೇಳುವ ಹಾಗಿಲ್ಲ. ಯಾವುದೇ ಎರಡು ಭಾಷೆಗಳ ವ್ಯಾಕರಣ ಪುಸ್ತಕಗಳ ಮೇಲ್ನೋಟದ ಓದುವಿಕೆಯೇ ಇದನ್ನು ಅನಾವರಣಗೊಳಿಸಬೇಕು. ಒಂದು ವ್ಯಾಕರಣ ಪುಸ್ತಕ ಇಲ್ಲದ ಭಾಷೆಯೂ ಸಹ ಲಿಖಿತ ವ್ಯಾಕರಣಗಳನ್ನು ಹೊಂದಿರುವ ಭಾಷೆಗಳಷ್ಟೇ ವ್ಯಾಕರಣ ಶ್ರೀಮಂತ ಆಗಿರುತ್ತದೆ. ಆದ್ದರಿಂದ, ವಾಕ್ಯಗಳ ಪ್ರಕಾರ, ಎಲ್ಲಾ ಭಾಷೆಗಳೂ ಸಮಾನವಾಗಿ ಶ್ರೀಮಂತ. ಯಾವುದೇ ನಿರ್ದಿಷ್ಟ ಭಾಷೆಯ ಬಡತನ ಅಥವಾ ಶ್ರೀಮಂತಿಕೆಗಳ ಬಗ್ಗ ಎಲ್ಲಾ ತಪ್ಪು ತಿಳುವಳಿಕೆಗಳ ಬೇರು ಪದಸಂಪತ್ತೇ (ವೊಕಾಬ್ಯುಲರಿ) ಆಗಿದೆ.

ನಮ್ಮ ಭಾಷೆಗಳು ವಿಜ್ಞಾನ ಮತ್ತು ತಂತ್ರಜ್ಞಾನಗಳಂಥ ಕ್ಷೇತ್ರಗಳಿಗೆ ಪದಗಳನ್ನು ಹೊಂದಿಲ್ಲ ಎಂದು ಮತ್ತೆ ಮತ್ತೆ ಕೇಳಿಬರುತ್ತಿದೆ. ಆದರೆ, ಭಾಷೆಯ ಪದ ಸಂಗ್ರಹದ (ದಾಸ್ತಾನು) ಬಗ್ಗೆ ಸಂಪೂರ್ಣ ಅಜ್ಞಾನವನ್ನು ಈ ಅಭಿಪ್ರಾಯ ಆಧರಿಸಿದೆ.

ವಾಸ್ತವವಾಗಿ, ಪ್ರತಿ ಭಾಷೆಗೂ ಒಂದೇ ರೀತಿಯ ಪದಶಕ್ತಿ ಇದೆ, ಏಕೆಂದರೆ ಒಂದು ಭಾಷೆಯ ಎಲ್ಲಾ ಪದಗಳನ್ನು ಕಟ್ಟುವುದು ಮೂಲಭೂತ ಅಂಶಗಳಾದ 'ಬೇರುಗಳು' ಮತ್ತು 'ಆಫಿಕ್ಸ್' ಅಥವಾ 'ಅನುಬಂಧಗಳು'. ಈ ಮೂಲಭೂತ ಅಂಶಗಳ ಸಂಖ್ಯೆಗಳಿಗೆ ಸಂಬಂಧಿಸಿದಂತೆ ಭಾಷೆಗಳ ನಡುವೆ ಎದ್ದುಕಾಣುವ ವ್ಯತ್ಯಾಸ ಇಲ್ಲ. ಈ ಮುಂದೆ ಸೂಚಿಸಿರುವ ಇಂಗ್ಲಿಷ್ ಪದಗಳನ್ನು ಇದನ್ನು ಬಹಳ ಸುಲಭವಾಗಿ ತೋರಿಸಬಲ್ಲವು.

1. **"ಹೀಮ್.** ರಕ್ತ ಎಂದು ಸೂಚಿಸುವ ಒಂದು ಪೂರ್ವಪ್ರತ್ಯಯ (ಪ್ರೀಫಿಕ್ಸ್)
2. **ಹೀಮೋಸೈಟ್.** ಒಂದು ರಕ್ತಕೋಶ.
3. **ಹೀಮಗಾಗ್.** ಕ್ಯಾಟಮಿನಿಯಲ್ ಮತ್ತು ಮೊಳೆರೋಗದ ಸ್ರಾವಗಳನ್ನು ಹೆಚ್ಚಿಸುವ ಒಂದು ಔಷಧಿ.
4. **ಹೀಮಲ್.** ರಕ್ತಕ್ಕೆ ಸಂಬಂಧಿಸಿದ್ದು.
5. **ಹೀಮಲೋಪಿಯಾ.** ಕಣ್ಣಿನ ಪಾಪೆಯೊಳಕ್ಕೆ ರಕ್ತ ನುಗ್ಗುವುದು; ರಕ್ತಭರಿತ ಕಣ್ಣು.
6. **ಹೀಮ್‌ಜಿಎಕ್ಸೆಸಿಸ್.** ಒಂದು ರಕ್ತನಾಳದ ಉಬ್ಬುವಿಕೆ.
7. **ಹೀಮಾಂಜಿಯೋಮಾ.** ದೇಹದ ಯಾವುದೇ ಭಾಗದಲ್ಲಿ ಏರ್ಪಡಬಹುದಾದ ರಕ್ತನಾಳಗಳ ಅಪ–ಬೆಳವಣಿಗೆ.
8. **ಹೀಮ್‌ಆರ್‌ಥ್ರೋಸಿಸ್.** ಒಂದು ಸ್ನಾಯುವಿನ ಸಂದಿನೊಳಗೆ ರಕ್ತ ಇರುವುದು.
9. **ಹೀಮಾಟ್‌ಎಮೆಸಿಸ್.** ರಕ್ತವಾಂತಿ
10. **ಹೀಮಾಟಿನ್.** ಕಬ್ಬಿಣ ಹೊಂದಿರುವ ಹಿಮೋಗ್ಲೋಬಿನ್‌ನ ಅಂಶ.

11. **ಹಿಮಾಟಿನಿಕ್.** ರಕ್ತದ ಗುಣಮಟ್ಟವನ್ನು ಹೆಚ್ಚಿಸುವ ಪ್ರತಿನಿಧಿ.

12. **ಹಿಮಾಟಿನ್ಯೂರಿಯಾ.** ಮೂತ್ರದಲ್ಲಿ ಹಿಮಾಟಿನ್‌ನ ಇರುವಿಕೆ.

13. **ಹಿಮಾಟೋಸೀಲ್.** ರಕ್ತ ತುಂಬಿರುವ ಒಂದು ಊತ; ಹೀಮಟೋಮಾ.

14. **ಹಿಮಾಟೋಕಾಲೋಸ್.** ಜನನದಿಂದ ಯೋನಿಯ ತಡೆಯಿಂದ ಮುಟ್ಟು ಹೊರಗೆ ಹೋಗದೆ ಇರುವುದು.

15. **ಹಿಮಾಟೋಜೆನೆಸಿಸ್.** ರಕ್ತದ ಅಭಿವೃದ್ಧಿ.

16. **ಹಿಮಾಟಾಯ್ಡ್.** ರಕ್ತದ ಸ್ವಭಾವ ಅಥವಾ ರೂಪ ಹೊಂದಿರುವುದು.

17. **ಹಿಮಟಾಲಜಿ.** ರಕ್ತದ ರೂಪುಗೊಳ್ಳುವಿಕೆ, ರಚನೆ, ಕೆಲಸಗಳು ಮತ್ತು ರೋಗಗಳ ವಿಜ್ಞಾನ.

18. **ಹಿಮಟೋಲೈಸಿಸ್.** ರಕ್ತ ಕಣಗಳ ನಾಶ ಮತ್ತು ಹಿಮೋಗ್ಲೋಬಿನ್‌ನ ಸ್ವಾತಂತ್ರ್ಯ.

19. **ಹೀಮಟೋಮಾ.** ರಕ್ತಗೆಡ್ಡೆ; ಎಚ್.ಆರಿಸ್, ಹೊರಗಿನ ರಕ್ತದ ಗೆಡ್ಡೆ" (ರಾವತ್, 1985ಗೆ ಧನ್ಯವಾದ)

20. **ಹೀಮೋಫೈಲಿಯಾ.** ರಕ್ತದ ಹೆಪ್ಪುಗಟ್ಟದೇ ಇರುವ ಗುಣ.

ಮೊದಲನೇ ನೋಟಕ್ಕೆ, ನಮ್ಮ ಭಾಷೆಗಳಲ್ಲಿ ಈ ಪದಗಳಿಗೆ ಸಮಾನಾರ್ಥಕ ಪದಗಳು ಇಲ್ಲ ಎಂದು ತೋರುತ್ತದೆ. ಆದರೆ, ನಿಜ ಎಂದರೆ, ಬೇರು (ಅಡಿಪಾಯ) 'ಹೀಮ್' (ಎಂದರೆ 'ರಕ್ತ' ಎಂದರ್ಥ) ಪದಕ್ಕೆ ಸಫಿಕ್ಸ್, ಎಂದರೆ ಉತ್ತರ ಪ್ರತ್ಯಯಗಳನ್ನು ಸೇರಿಸುವುದರಿಂದ ಮೇಲಿನ ಎಲ್ಲಾ ಪದಗಳು ಸೃಷ್ಟಿ ಆಗಿವೆ. ಈ ಮುಂದಿನ ಹಿಂದಿ ಸಮಾನಾಂತರಗಳು, ಈ ಪದಗಳವು. ಇದರಿಂದ, ನಮ್ಮ ಭಾಷೆಗಳು ಈ ಸಮಾನಾಂತರಗಳನ್ನು ಹೊಂದಿವೆ, ಅಥವಾ ಅವುಗಳನ್ನು ಬಹಳ ಬೇಗ ನಾವು ಪಡೆಯಬಹುದು ಎಂದು ಸ್ಪಷ್ಟವಾಗಿ ತಿಳಿಸುತ್ತವೆ.

1. ರಕ್ತ್ 2. ರಕ್ತ್–ಕೋಶಿಕಾ 3. ರಕ್ತ್–ಪ್ರೇರಕ್ 4. ರಕ್ತೀಯ 5. ರಕ್ತೀಯ–ನೇತ್ರ್ 6. ರಕ್ತ್‌ವಾಹಿನಿ – ಪಾಸಾರ್ 7. ರಕ್ತ್–ಮಸ್ಸಾ 8. ರಕ್ತ್‌ಜೋರ್–ವಿಕಾರ್ 9. ರಕ್ತ್–ವಾಮನ್ 10. ಲೌಹ್‌ರಕ್ತೀಯ 11. ರಕ್ತ್‌ವರ್ಧಕ್ 12. ರಕ್ತ್‌ಮೂತ್ರ್ 13. ರಕ್ತ್‌ಗ್ರಂಥಿ – ಸೂಜನ್ 14. ರಕ್ತ್–ಮಾಸ್‌ಧರ್ಮರೋಧ್ 15. ರಕ್ತ್–ಉತ್ಪಾದನ್ 16. ರಕ್ತ್‌ರೂಪ್ 17. ರಕ್ತ್–ವಿಗ್ಯಾನ್ 18. ರಕ್ತ್–ಹ್ರಾಸ್ 19. ರಕ್ತ್–ಗ್ರಂಥಿ 20. ರಕ್ತ್–ಜಮಾವ್‌ಹೀನ್‌ತಾ.

ಆದ್ದರಿಂದ, ನಮ್ಮ ಭಾಷೆಗಳು ಪದಸಂಪತ್ತಿನಲ್ಲಿ ಬಡವಾಗಿವೆ ಎಂದು ಹೇಳುವುದು ಕೇವಲ ಒಬ್ಬರಿಗೆ ಸರಿಯಾದ ಮಾಹಿತಿಯ ಕೊರತೆ ಇದೆ ಎನ್ನುವುದಕ್ಕೆ ಸರಿಯಾದ ಪುರಾವೆ.

ಮುಂಚೆ ಉಲ್ಲೇಖಿಸಿರುವ ಇಂಗ್ಲಿಷ್ ಪದಗಳು ಇಂಗ್ಲಿಷ್ ಭಾಷೆಯ ಶ್ರೀಮಂತಿಕಯೆ ಬಗ್ಗೆ ಹೊಗಳು ಭಟ್ಟರು ಹರಡಿರುವ ಸುಳ್ಳುಗಳ ಬಗ್ಗೆ ಒಂದು ವಾಸ್ತವಾಂಶವನ್ನು ಬಹಿರಂಗಪಡಿಸುತ್ತವೆ. ಈ ಪದಗಳಲ್ಲಿ ಯಾವ ಒಂದೂ ಸಹ ಇಂಗ್ಲಿಷ್‌ನದ್ದಲ್ಲ; ಎಲ್ಲವನ್ನೂ ನೇರವಾಗಿ ಲ್ಯಾಟಿನ್ ಭಾಷೆಯಿಂದ ಎರವಲು ಪಡಯಲಾಗಿದೆ. ಹೀಗಾಗಿ, ಒಬ್ಬರು ಇಂಗ್ಲಿಷ್‌ನಲ್ಲಿ ನಿರರ್ಗಳತೆ ಪಡೆದರೆ, ವೈಜ್ಞಾನಿಕ ಪದಗಳು ಹೆಚ್ಚು ಸುಲಭವಾಗಿ ಅರ್ಥ ಅಗುತ್ತವೆ ಎನ್ನುವುದು ಎಂದು ಮಿಥ್ಯಾ ಪರಿಕಲ್ಪನೆ, ಏಕೆಂದರೆ ಇಂಗ್ಲಿಷ್‌ನಲ್ಲಿರುವ ವೈಜ್ಞಾನಿಕ ಪದ ಕಣಜದ ಭಾರೀ ಅಂಶ ಲ್ಯಾಟಿನ್ ಅಥವಾ ಗ್ರೀಕ್ ಮೂಲದ್ದು.

ವಾಸಿ ಆಗದ ಇಂಗ್ಲಿಷ್ ಸೋಂಕಿಗೆ ಜವಾಬ್ದಾರಿ ಹೊರಬೇಕಾದ ಇನ್ನೊಂದು ಮಿಥ್ಯೆ ಎಂದರೆ, ಇಂಗ್ಲಿಷ್‌ನಲ್ಲಿ ನಿರರ್ಗಳತೆ ಪಡೆದರೆ, ಇಡೀ ಪ್ರಪಂಚದ ಬಾಗಿಲುಗಳು ತೆರೆದುಕೊಳ್ಳುತ್ತವೆ ಎನ್ನುವ. ಮಿಥ್ಯಾ ಪರಿಕಲ್ಪನೆ. ಆದ್ದರಿಂದ, ಭಾಷಿಕವಾಗಿ ಪ್ರಪಂಚದ ಸುತ್ತಮುತ್ತ ಏನಾಗುತ್ತಿದೆ ಎಂದು ತಿಳಿದುಕೊಳ್ಳುವುದು ಅತ್ಯವಶ್ಯಕ.

**III.2.3 "ಎಲ್2 ಒಂದು ಜಾಗತಿಕ ಭಾಷೆ ಎನ್ನುವ ಮಿಥ್ಯ.** ವಿದೇಶೀ ಎಲ್2ವನ್ನು ಆಗಿಂದಾಗ್ಗೆ ಹೆಚ್ಚಿನ ಶಿಕ್ಷಣ, ಕೆಲಸ ಮತ್ತು ಇತರ ಅವಕಾಶಗಳಿಗೆ ಅವಶ್ಯಕ ಎಂದು ನೋಡಲಾಗಿದೆ, ಆದರೂ, ಫಿಲಿಪ್‌ಸನ್ ತೋರಿಸಿರುವಂತೆ, (1992) ಇದು ಒಂದು ರಾಜಕೀಯ ನಿರ್ಯಾತದಲ್ಲಿ ಉಂಟಾಗಿಲ್ಲ, ಬದಲಾಗಿ, ಬಲಶಾಲಿ ದೇಶಗಳು ಅಥವಾ ಗುಂಪುಗಳು ತಮ್ಮ ಸ್ವಂತ ಭಾಷೆಗಳನ್ನು ಉದ್ದೇಶಪೂರ್ವಕವಾಗಿ ಪ್ರವರ್ತಿಸಿರುವುದರ ಪರಿಣಾಮ. ಇದೇ ಹೊತ್ತಿನಲ್ಲಿ, ಕಡಿಮೆ–ವರಮಾನದ ದೇಶಗಳ ಅನೌಪಚಾರಿಕ ಕ್ಷೇತ್ರದಲ್ಲಿ ಉದ್ಯೋಗ ಜನಸಂಖ್ಯೆಯ ಶೇಕಡ 50 ಅಥವಾ ಹೆಚ್ಚಿನದನ್ನು ಒಳಗೊಂಡಿದ್ದು, ಅದು ಹೆಚ್ಚುತ್ತಿದೆ, ಮತ್ತು ಹೆಚ್ಚಿನ ಜನರಿಗೆ ಪ್ರಾಥಮಿಕ ಶಾಲೆಯೇ ಕೊನೆ. ಭಾರೀ ಬಹುಮತ ಜಾಗತಿಕ ಮಾರುಕಟ್ಟೆಗೆ ಸೇರುವುದಿಲ್ಲ, ಮತ್ತು ಎಲ್2ಗೆ ಅವರ ಅವಶ್ಯಕತೆ ಬಹಳ ಕಮ್ಮಿ (ಬ್ರುಥಿಆಕ್ಸ್ 2002)" *@( ಬೆನ್‌ಸನ್, ೨೦೦೫)*

**IV.** **ಸಮಕಾಲೀನ ಭಾಷಾ ಶೈಲಿಗಳು**

ಇಂದಿನ ಭಾಷಾ ದೃಶ್ಯಾವಳಿಯಲ್ಲಿ ಎರಡು ಶೈಲಿಗಳು ನಿಚ್ಚಳವಾಗಿ ಕಾಣಿಸುತ್ತಿವೆ. ಒಂದು, ಕ್ಷೀಣವಾಗುತ್ತಿರುವ ಇಂಗ್ಲಿಷ್‌ನ ಬಳಕೆ, ಪ್ರತಿಷ್ಠೆ ಮತ್ತು ಸಾರ್ವಭೌಮತ್ವ ಮತ್ತು ಎರಡು, ಭಾಷಾ ಬಳಕೆಯ ಎಲ್ಲಾ ಕ್ಷೇತ್ರಗಳಲ್ಲಿ ಇಂಗ್ಲಿಷ್ ಅಲ್ಲದೆ ಇತರ ಭಾಷೆಗಳ ಹೆಚ್ಚುತ್ತಿರುವ ಪ್ರಾಮುಖ್ಯತೆ.

ನಾವು, ಈ ಮುಂಚೆ ನೋಡಿರುವಂತೆ, ಎಲ್ಲಾ ಇಂಗ್ಲಿಷ್ ಮಾತನಾಡದ ದೇಶಗಳಲ್ಲಿ (ಮಹಾನ್ ಭಾರತ ಮತ್ತು ಆಕೆಯ ಮಾಜಿ ಸಹೋದರಿ ಮತ್ತು ಇಂದಿನ ಭೌಗೋಳಿಕ ತಿಳುವಳಿಕೆ ನೆರೆದೇಶ ಪಾಕಿಸ್ತಾನಗಳನ್ನು ಹೊರತುಪಡಿಸಿ) ಶಿಕ್ಷಣವನ್ನು

ಇಂಗ್ಲಿಷ್‌ನಲ್ಲಿ ನೀಡಲಾಗುತ್ತಿತ್ತೋ ಅಲ್ಲೆಲ್ಲಾ ಇಂಗ್ಲಿಷ್‌ನ್ನು ಹಂತ ಹಂತವಾಗಿ ನಿಲ್ಲಿಸಲಾಗಿದೆ ಅಥವಾ ನಿಲ್ಲಿಸಲಾಗುತ್ತಿದೆ. ಇತರ ಕಾರ್ಯಕ್ಷೇತ್ರಗಳಲ್ಲೂ  ಇದೇ ಆಗುತ್ತಿದೆ.
ಸುಮಾರು 2000ದಲ್ಲಿ, ಅಂತರ್ಜಾಲ ಶೇಕಡ 80 ರಷ್ಟು ಇಂಗ್ಲಿಷ್‌ನಲ್ಲಿತ್ತು; ಈಗ ಅದು ನಲ್ವತ್ತಕ್ಕಿಂತ ಕಡಿಮೆ ಆಗಿದೆ. ಇಂದು ಅಂತರ್ಜಾಲದ ಮಾಹಿತಿ ಹತ್ತಾರು ಭಾಷೆಗಳಲ್ಲಿ ಲಭ್ಯ.

ಭಾರತದತ್ತ ನೋಡಿದರೆ, ಶೇಕಡ 95 ರಷ್ಟು ವಾಣಿಜ್ಯ  ಭಾರತೀಯ ಭಾಷೆಗಳಲ್ಲಿದ್ದು, ಕೇವಲ ಶೇಕಡಾ 5 ಇಂಗ್ಲಿಷ್‌ನಲ್ಲಿ ಇದೆ.

ಇಂದಿನ ಪ್ರಪಂಚ ತಲುಪಿರುವ ಭಾಷಿಕ ಹಂತದಲ್ಲಿ, ನಿಮಗೆ ಕೇವಲ ಇಂಗ್ಲಿಷ್ ಗೊತ್ತಿದ್ದು, ಬೇರೆ ಯಾವ ಭಾಷೆಯೂ ಬರದಿದ್ದರೆ, ಒಂದು ಕಂಪನಿ ಕೆಲಸವನ್ನು ನೀಡುವ ವ್ಯಕ್ತಿಗಳಲ್ಲಿ ನೀವು ಕಟ್ಟಕಡೆಯವರಾಗಿರುತ್ತೀರಿ. ದಿ ಇಕಾನಮಿಸ್ಟ್ ಎನ್ನುವ ಪ್ರತಿಷ್ಠಿತ ನಿಯತಕಾಲಿಕದಲ್ಲಿ  ಒಂದು ಇತ್ತೀಚಿನ ಲೇಖನದ ಪ್ರಕಾರ, ಬ್ರಿಟನ್‌ನ ನಿವಾಸಿಗಳಿಗೆ ಕೇವಲ ಇಂಗ್ಲಿಷ್ ಬರುವುದರಿಂದ ಅವರು ತೀವ್ರ ಅನಾನುಕೂಲ ಅನುಭವಿಸುತ್ತಿದ್ದಾರೆ ಎಂದು ಹೇಳಿತು.  ಕೆಳಗೆ ಉಲ್ಲೇಖಿಸಿರುವ ಉಕ್ತಿ ಪ್ರಪಂಚ ಯಾವ ಭಾಷಿಕ ದಿಕ್ಕಿನತ್ತ ಚಲಿಸುತ್ತಿದೆ ಎನ್ನುವುದಕ್ಕೆ ಒಂದು ಪುರಾವೆ ಒದಗಿಸುತ್ತದೆ.

"ಇಂದಿನ ಕೆಲಸಗಾರರು ಇಂಗ್ಲಿಷ್ ಅಲ್ಲದೆ ಇತರ  ಭಾಷೆಗಳಲ್ಲಿ ಮಾತನಾಡಿ, ಬರೆದು, ಸಂವಹನ ಮಾಡಲು ಸಮರ್ಥರಿರಬೇಕಷ್ಟೇ ಅಲ್ಲ, ತಮ್ಮ ಸ್ವಂತ ಸಾಮಾಜಿಕ ಮತ್ತು ಸಾಂಸ್ಕೃತಿಕ ಅನುಭವಗಳನ್ನು ಹಂಚಿಕೊಂಡಿಲ್ಲದ ವ್ಯಕ್ತಿಗಳ ಜೊತೆ ಸಹ, ಹೀಗೆ ಮಾಡಲು ಸಾಮರ್ಥ್ಯ ಹೊಂದಿರಬೇಕು, @ *(ಸ್ಟೆಫನಿಬೆಲ್‌ರೋಸ್, ದಿ ಗೋಲ್ಡ್‌ಮನ್ ಸಾಕ್ಸ್ ಫೌಂಡೇಶನ್; ವಿಶಾಖಾ ದೇಸಾಯಿ, ದಿ ಏಷ್ಯಾ ಸೊಸೈಟಿ, www).*

"ಇತರ ದೇಶಗಳು ವಿದೇಶೀ ಭಾಷೆಗಳ ಶಿಕ್ಷಣವನ್ನು ಪ್ರವರ್ತಿಸುವ ಮತ್ತು ಅಗ್ರಸ್ಥಾನ ಕೂಡ ನೀಡುವ ನೀತಿಗಳನ್ನು ಮತ್ತು ಹಣಕಾಸುಗಳ ಭಂಡಾರವನ್ನು ಉಂಟುಮಾಡುತ್ತಿರುವಾಗ, ಯುಎಸ್ ವಿದ್ಯಾರ್ಥಿಗಳು ಹಿಂದೆ ಬೀಳುತ್ತಿದ್ದಾರೆ ಮತ್ತು ಜಾಗತಿಕ ಮಾರುಕಟ್ಟೆಯಲ್ಲಿ ಕಷ್ಟಪಡಬಹುದು ಎಂದು ಯುಎಸ್‌ನ ಪರಿಣತರು ಹೇಳುತ್ತಾರೆ."  *@ ಏಷ್ಯಾ ಸೊಸೈಟಿ ನ್ಯೂಸ್, 2ನೇ ಏಪ್ರಿಲ್, 2009, www.*

**“ಇಂಗ್ಲೀಷ್ ತನ್ನ ಏಕಸ್ವಾಮ್ಯತ್ವದ ಸ್ಥಾನವನ್ನು ಕಳೆದುಕೊಳ್ಳುತ್ತಿದೆ..”** ಇಂಗ್ಲಿಷ್ 20ನೇ ಶತಮಾನದ ಕೊನೆಯ ಹೊತ್ತಿಗೆ ಹೆಚ್ಚೂ–ಕಮ್ಮಿ ಸಾಧಿಸಿರುವ ಏಕಸ್ವಾಮ್ಯತ್ವದ ಸ್ಥಾನವನ್ನೂ ಯಾವುದೇ ಒಂದು ಭಾಷೆ 21ನೇ ಶತಮಾನದಲ್ಲಿ ಆಕ್ರಮಿಸಿಕೊಳ್ಳುವುದಿಲ್ಲ.”

“ಆದ್ದರಿಂದ ಉಪಗ್ರಹ ಪ್ರಸಾರದ ಎರಡನೇ ಅಲೆಯನ್ನು ಎರಡು ಶೈಲಿಗಳು ವ್ಯಾಪಿಸಿ, ಮೇಲುಗೈ ಹೊಂದಿರುತ್ತವೆ ಎನ್ನುವುದು ಸುಸ್ಪಷ್ಟ; ಪ್ರಪಂಚದ ಇತರ ಪ್ರಮುಖ ಭಾಷೆಗಳು ತಮ್ಮ ಜಾಗತಿಕ ಪ್ರಸರಣವನ್ನು ಹೆಚ್ಚಿಸಿಕೊಳ್ಳುತ್ತವೆ, ಮತ್ತು ದೊಡ್ಡ ಆಕಾರದ ನೀಡುವವರು ತಮ್ಮ ಸೇವೆಗಳನ್ನು ಸ್ಥಳೀಯ ಮಾಡುವರು. ಎರಡೂ ಶೈಲಿಗಳು 21ನೇ ಶತಮಾನದಲ್ಲಿ ಹೆಚ್ಚು ದಟ್ಟಣೆಯ ಮತ್ತು ಭಾಷಿಕವಾಗಿ ಬಹುವಚನದ ವಾಕ್‌ದೃಶ್ಯದ ಭೂದೃಶ್ಯ ಸೂಚಿಸುತ್ತವೆ.”

“ಇಂಗ್ಲಿಷ್ ಮತ್ತು ಮಾಹಿತಿ ತಂತ್ರಜ್ಞಾನದ ನಡುವೆ ನಿಕಟ ಸಂಪರ್ಕ ಒಂದು ತಾತ್ಕಾಲಿಕ ಅದ್ಭುತ ಘಟನೆ ಆಗಬಹುದು. ಹಾಗಾಗಿ, ಇಂಗ್ಲಿಷ್ ಮಾತನಾಡುವವರು ಅತ್ಯುತ್ತಮ ಮತ್ತು ಅತ್ಯಾಧುನಿಕ ತಂತ್ರಜ್ಞಾನವನ್ನು ಸಂತೋಷದಿಂದ ಅನುಭವಿಸುತ್ತಿದ್ದರು, ಇದೀಗ ಅಷ್ಟೇನೂ ನಿಜ ಅಲ್ಲ.” *@ ಡೇವಿಡ್ ಗ್ರಡ್ಡಾಲ್. 2000 (1997).*

ಅಭಿವೃದ್ಧಿ ಹೊಂದಿರುವ ಪ್ರಪಂಚದಲ್ಲಿ ಇರುವ ಹೆಚ್ಚೂ–ಕಮ್ಮಿ ಎಲ್ಲಾ ಶಾಲೆಗಳೂ ತಮ್ಮ ಮಕ್ಕಳಿಗೆ ಮಾತೃಭಾಷೆಯ ಜೊತೆ ಇತರ ಭಾಷೆಗಳನ್ನು ಬೋಧಿಸಲು ಪ್ರಯತ್ನಿಸುತ್ತಿದ್ದಾರೆ, ಮತ್ತು ಈ ಇತರ ಭಾಷೆಗಳು ಕೇವಲ ಇಂಗ್ಲಿಷ್ ಆಗಿಲ್ಲ.

ವಿಷಯಗಳು ಎಷ್ಟರಮಟ್ಟಿಗೆ ಮುಂದುವರೆದಿವೆ ಎಂದರೆ, ಈಗ ಯೂಎಸ್‌ಏ ಯಲ್ಲಿ ಕೂಡಾ ಶೇ 90ರಷ್ಟು ವಿದ್ಯಾರ್ಥಿಗಳು ಚೈನೀಸ್ ಅಲ್ಲದ ಹಿನ್ನಲೆಯಿಂದ ಬರುವ ಚೈನೀಸ್ ಮಾಧ್ಯಮ ಶಾಲೆಗಳನ್ನು ಕಾಣಬಹುದು. (ಈ ನೀತಿಯು ಬಹಳ ಮಟ್ಟಿಗೆ ತಪ್ಪು, ಆದರೂ ಪ್ರಪಂಚದಲ್ಲಿ ಚೈನೀ ಭಾಷೆಯ ಉನ್ನತಿಯ ಬಗ್ಗೆ ಇದು ಸಾಕಷ್ಟು ಹೇಳುತ್ತದೆ). 2000ಕ್ಕೆ ಹೋಲಿಸಿದರೆ 2007 ರಲ್ಲಿ ಇದ್ದ ಚೈನೀಸ್ ಕಲಿಯುವರ ಸಂಖ್ಯೆ ಹತ್ತರಷ್ಟಿತ್ತು. *(ಯುಎಸ್‌ಏ ಟುಡೇ, 20ನೇ ನವೆಂಬರ್, 2007)*

“ವಿಶ್ವ ಆರ್ಥಿಕತೆಯಲ್ಲಿ ಬೆಳೆಯುತ್ತಿರುವ ಚೈನಾದ ಪ್ರಾಮುಖ್ಯತೆಯನ್ನು ಗುರುತಿಸಿ, ಪನಾಮಾ ದೇಶವು ಮಾಂದರಿನ್ ಬೋಧನೆಯನ್ನು ಎಲ್ಲಾ ಶಾಲೆಗಳಲ್ಲಿ ಕಡ್ಡಾಯ ಮಾಡಲು ಕ್ರಮ ಕೈಗೊಳ್ಳುತ್ತಿದೆ.” *@ ಬಿಬಿಸಿ ವಾರ್ತೆ (www).6ನೇ ಡಿಸೆಂಬರ್, 2007).*

ಮುಖ್ಯವಾಗಿ ಇಂಗ್ಲಿಷ್‌ನಲ್ಲಿ ಮಾತನಾಡುವ ದೇಶಗಳಲ್ಲೂ ಸಹ, ತಮ್ಮ ಮಾತೃಭಾಷೆ ಇಂಗ್ಲಿಷ್ ಆಗಿಲ್ಲದ ಹೆಚ್ಚು ಹೆಚ್ಚು ಜನ ಇಂಗ್ಲಿಷ್‌ನ ಉಪಯೋಗವನ್ನು ಬಿಟ್ಟು ಬಿಡುತ್ತಿದ್ದಾರೆ. ಯೂಎಸ್‌ಏನಲ್ಲಿ 1990 ರ ಜನಗಣತಿಯ ಸಮಯದಲ್ಲಿ, 31.8 ದಶಲಕ್ಷ ವ್ಯಕ್ತಿಗಳು ತಾವು ಮನೆಯಲ್ಲಿ ಇಂಗ್ಲಿಷ್ ಬಳಸುತ್ತಿಲ್ಲ ಎಂದು ದಾಖಲಿಸಿದ್ದರು. ಇದು 2000ದ ಜನಗಣತಿಯ ಹೊತ್ತಿಗೆ 47 ದಶಲಕ್ಷಗಳಿಗೆ ಏರಿತ್ತು. ಸಂಖ್ಯೆಯಲ್ಲಿ ಈ ಹೆಚ್ಚಳವು ಆಯಾ ಭಾಷಿತ ಗುಂಪುಗಳಲ್ಲಿ ಜನಸಂಖ್ಯೆಯ ಹೆಚ್ಚಳಕ್ಕಿಂತ ತುಂಬಾ ಹೆಚ್ಚಿನದ್ದಾಗಿತ್ತು. ಸ್ಪಾನಿಷ್ ಜನಸಂಖ್ಯೆಯ ಇಂಥ ಹೆಚ್ಚಳವೇ ಶೇಕಡ 60ಕ್ಕೆ ಹೆಚ್ಚಿತ್ತು. 1980 ರಿಂದ 2011ರವರೆಗೆ, ಇಂಗ್ಲಿಷ್‌ನ್ನು ಮನೆಯಲ್ಲಿ ಉಪಯೋಗಿಸದೇ ಇದ್ದವರ ಸಂಖ್ಯೆ ಯೂಎಸ್‌ಏಯಲ್ಲಿ 140 ಶೇಕಡಾ ರಷ್ಟು ಜಾಸ್ತಿಯಾಗಿತ್ತು. ಆದರೆ ಈ ವರ್ಷಗಳಲ್ಲಿ ಯೂಎಸ್‌ಎ ನ ಜನಸಂಖ್ಯೆಯೇ ಕೇವಲ 40 ಶೇಕಡಾ ಮಾತ್ರ ಹೆಚ್ಚಿತ್ತು. ಈ ವರ್ಷಗಳಲ್ಲಿ ಮನೆಯಲ್ಲಿ ಇಂಗ್ಲಿಷ್‌ನ್ನು ತ್ಯಜಿಸಿದವರ ಸಂಖ್ಯೆ ವಾಸ್ತವವಾಗಿ ಎರಡರಷ್ಟು ಹೆಚ್ಚಾಗಿತ್ತು ಎಂದರ್ಥ. ಇದಕ್ಕೆ ವಿರುದ್ಧವಾಗಿ, ಭಾರತೀಯ ಗಣ್ಯರು (ಈ ಮಾಹಿತಿ ಯುಗದಲ್ಲಿ ಮಾಹಿತಿ ಹೊಂದಿಲ್ಲದ ದುಡುಕು ಸ್ವಭಾವದ ಸ್ವಾಮಿಗಳು) ರಾಷ್ಟ್ರೀಯ ಸ್ವಾಭಿಮಾನವನ್ನು ಸಂಪೂರ್ಣವಾಗಿ ತೊರೆದಿದ್ದಾರೆ, ಇಂಗ್ಲಿಷ್‌ನಲ್ಲಿ ಮತ್ತು ಇಂಗ್ಲಿಷ್‌ಗೆ ಬೆಳಿಗ್ಗೆ, ಮಧ್ಯಾಹ್ನ ಮತ್ತು ರಾತ್ರಿ ಹೊತ್ತು ಪ್ರತಿದಿನ ನಮಸ್ಕಾರ ಹಾಕುತ್ತಾರೆ.

ಮಾಜಿ ಇಂಗ್ಲಿಷ್ ವಸಾಹತು ದೇಶಗಳಲ್ಲಿ ಮಾಧ್ಯಮಗಳಿಂದ ಇಂಗ್ಲಿಷ್‌ನ್ನು ಹೊರಕ್ಕೆ ಹೇಗೆ ಹೊರದಬ್ಬಲಾಗುತ್ತಿದೆ ಎಂದು ತೋರಿಸಲು ಈ ಮುಂದೆ ಸೂಚಿಸಿರುವ ಅರ್ಜೆಂಟೈನಾದ ಅಂಕಿ–ಅಂಶಗಳು ಒಂದು ಒಳ್ಳೆಯ ಪ್ರಮಾಣ. 1983 ರಲ್ಲಿ ಅರ್ಜೆಂಟೈನಾ ಮಾಧ್ಯಮವು ಶೇಕಡಾ 49 ರಷ್ಟು ಹೊರಗಿನ ದೇಶಗಳದ್ದು. 1996 ರಲ್ಲಿ ಈ ಸಂಖ್ಯೆ 22 ಶೇಕಡಾ ಇತ್ತು. ಹೀಗಾಗಿ, ತಾನು ಹಿಂದೆ ಹೊಂದಿದ್ದ ಪ್ರಬಲಸ್ಥಾನದ ಎಲ್ಲಾ ಕಾರ್ಯಕ್ಷೇತ್ರಗಳಲ್ಲಿ ಇಂಗ್ಲಿಷ್ ಇಳಿಮುಖ ಆಗುತ್ತದೆ ಎಂದು ಯಾವ ಸಂದೇಹವೂ ಉಳಿದಿರಬೇಕಾಗಿಲ್ಲ.

ಹಲವಾರು ಭಾಷಾ ಆಧಾರಿತ ತಂತ್ರಜ್ಞಾನಗಳಾದ ಅಂತರ್ಜಾಲ, ಗಣಕಯಂತ್ರ, ಮೊಬೈಲ್ ಟೆಲಿಫೋನಿ, ಈ–ಪುಸ್ತಕಗಳು, ಇತ್ಯಾದಿಗಳ ಉದಯದಿಂದ, ದೇಶಿ ಭಾಷೆಗಳ ವಾಣಿಜ್ಯ ಸಾಧ್ಯತೆಗಳನ್ನು ಒತ್ತಿ ಹೇಳಬೇಕಾಗಿಲ್ಲ.

ಇಂಗ್ಲಿಷ್ ಭಾಷೆ ನಮಗೆ ಉಂಟು ಮಾಡಿರುವ ಶೈಕ್ಷಣಿಕ, ಆರ್ಥಿಕ, ವಾಣಿಜ್ಯ ಮತ್ತು ಸಾಂಸ್ಕೃತಿಕ ನಷ್ಟಗಳನ್ನು ಸಹ ನಾವು ತಕ್ಕಡಿಯಲ್ಲಿಟ್ಟು ತೂಗಬೇಕು. ಮುಂದಿನ ಭಾಗದಲ್ಲಿ ಇವುಗಳ ಒಂದು ಸಂಕ್ಷಿಪ್ತ ವರದಿಯನ್ನು ನೀಡಲಾಗಿದೆ.

**V.** ಎಲ್ಲ ಮೊಟ್ಟೆಗಳನ್ನೂ ಇಂಗ್ಲಿಷ್ ಬುಟ್ಟಿಯಲ್ಲೇ ಇಟ್ಟ ಕಾರಣ ಆದ ಇತರ ಗಂಭೀರ ನಷ್ಟಗಳು

ಬಲವಂತಪಡಿಸುವ ವಾಣಿಜ್ಯ ಅವಶ್ಯಕತೆಗಳ ಕಾರಣ, ಪ್ರಪಂಚದ ಹೆಚ್ಚೂ–ಕಮ್ಮಿ ಎಲ್ಲಾ ದೇಶಗಳೂ ಇತರ ದೇಶಗಳ ಭಾಷೆಗಳನ್ನು ಕಲಿಯುವುದರಲ್ಲಿ ನಿರತವಾಗಿವೆ. ಆದರೆ ನಾವು ಇಂಗ್ಲಿಷ್ ಸ್ಮಶಾನದಲ್ಲಿ, ರಾತ್ರಿ–ಹಗಲು ಸ್ಮಶಾನ ನಡೆ ಮಡುತ್ತಿದ್ದೇವೆ. ಇತರ ಭಾಷೆಗಳನ್ನು ಕಲಿಯುವ ಅಗತ್ಯಕ್ಕೆ ನಾವು ಯಾವುದೇ ಗಮನ ನೀಡುತ್ತಿಲ್ಲ. ಇದರಿಂದಾಗಿ, ನಾವು ಭಾರಿ ಆರ್ಥಿಕ ಮತ್ತು ವಾಣಿಜ್ಯ ನಷ್ಟಗಳನ್ನು ಅನುಭವಿಸುತ್ತಿದ್ದೇವೆ. ನಾವು ಇತರ ಭಾಷೆಗಳನ್ನು ಕಲಿಯದಿದ್ದರೆ, ಹತ್ತಿರದ ಭವಿಷ್ಯದಲ್ಲಿ ನಾವು ಸಂಪೂರ್ಣ ಏಕಾಂಗಿತನದಲ್ಲಿ ಉಳಿದುಬಿಡುತ್ತೇವೆ. ಇಂದು, ಇಂಗ್ಲಿಷ್‌ಗಿಂತ ನಮಗೆ ಚೈನೀಸ್ ಮತ್ತು ಸ್ಪಾನಿಷ್‌ಗಳು ಹೆಚ್ಚು ಮುಖ್ಯ ಆಗಿರಬೇಕು. ಆದರೆ, ನಾವು ಹತ್ತಿರದ ಭವಿಷ್ಯಕ್ಕೆ ಮಾತ್ರವಲ್ಲದೆ, ಇಂದಿನ ಪರಿಸ್ಥಿತಿಗೂ ಸಂಪೂರ್ಣ ಕುರುಡಾಗಿ ಹೋಗಿದ್ದೇವೆ. ಎಲ್ಲಾ ಮಾತೃಭಾಷಾ ಕಾರ್ಯಕ್ಷೇತ್ರಗಳಲ್ಲಿ ಇಂಗ್ಲಿಷ್‌ನ್ನು ಪ್ರಪಂಚದಾದ್ಯಂತ ಹಂತ ಹಂತವಾಗಿ, ಅದು ಹಿಂದೆ ಇದ್ದ ಸ್ಥಾನದಿಂದ ತೆಗೆಯಲಾಗುತ್ತಿದೆ. ಆದರೆ ನಾವು ನಮ್ಮ ಎಲ್ಲಾ ಶಿಕ್ಷಣ, ಸಂಸ್ಕೃತಿ ಮತ್ತು ಸಂವಹನ ಸ್ಥಳಗಳನ್ನು ಇಂಗ್ಲಿಷ್ ಭಾಷೆಗೆ ಕೊಟ್ಟುಬಿಡುತ್ತಿದ್ದೇವೆ. ವಿಶ್ವ ವ್ಯಾಪಾರದಲ್ಲಿ ಕಮ್ಮಿ ಆಗುತ್ತಿರುವ ಭಾರತದ ಪಾಲನ್ನು ಸುಮ್ಮನೆ ಮೇಲ್ನೋಟ ಹಾಯಿಸಿದರೂ ಕೂಡ, ಅದರಿಂದ ನಮಗೆ ಏನು ಅನುಕೂಲ ಸಿಕ್ಕಿದೆ ಎಂದು ಹೇಳಲು ಸಾಕು. 1950 ರಲ್ಲಿ ವಿಶ್ವ ವ್ಯಾಪಾರದಲ್ಲಿ ಭಾರತದ ಪಾಲು ಶೇಕಡಾ 178 ಇತ್ತು. ಇದು ಈಗ ಶೇಕಡಾ 50 ಕ್ಕೆ ಇಳಿದಿದೆ. ಈ ವರ್ಷಗಳಲ್ಲಿ ಭಾರತದಲ್ಲಿ ಇಂಗ್ಲಿಷ್ ಹರಡುವುದರಲ್ಲಿ ಆದ ಹೆಚ್ಚಳ ನಮಗೆ ಗೊತ್ತೇ ಇದೆ. ವಿಶ್ವ ವ್ಯಾಪಾರದಲ್ಲಿ ಭಾರತದ ಪಾಲಿನ ನಿರಂತರ ಕುಸಿತ, ನಮ್ಮ ಭಾರತೀಯ ನೀತಿ ರೂಪಿಸುವವರ ಇಂಗ್ಲಿಷ್ ಸವಾರಿಯು 'ಒಂದು ಕಣ್ಣಿನ ಕುದುರೆ ಮತ್ತು ಕುರುಡು ಸವಾರ' ಎನ್ನುವ ಮಕ್ಕಳ ಕಥೆಯಂತೆ ಇದೆ ಎಂದು ನಮಗೆ ತಿಳಿಸುತ್ತದೆ. ಕೆಲವು ದಿನಗಳ ಹಿಂದೆ, ಯುಎನ್ ಖ್ಯಾತಿಯ ಮಾನ್ಯ ಸಚಿವರಾದ ಶ್ರೀ ಶಶಿತಾರೂರ್ ಅವರ ಭಾರತದ ಅಭಿವೃದ್ಧಿಗೆ ಇಂಗ್ಲಿಷ್ ಕೀಲಿಕೈ ಎಂದು ಹೇಳಿಕೆ ಕೊಟ್ಟಿದ್ದರು.

ಅವರು ವಿಶ್ವಸಂಸ್ಥೆಯಲ್ಲಿ ಇದ್ದಾಗಲಾದರೂ ಕನಿಷ್ಠ, ಭಾಷೆಯ ಬಗೆಗಿನ ಯಾವುದಾದರೂ ಯುಎನ್ ದಾಖಲೆಯನ್ನು ಅವರು ಓದಿದ್ದಿದ್ದರೆ, ಅವರು ಈ ಹೇಳಿಕೆಯನ್ನು ಕೊಡುತ್ತಿರಲೇ ಇಲ್ಲ. ಆದರೆ, ಅನಕ್ಷರತೆ ಹೆಚ್ಚು ಲಾಭಗಳನ್ನು ನೀಡುವುದರಿಂದ ಒಬ್ಬ ಭಾರತೀಯ ಮಂತ್ರಿ ಏಕೆ ಓದಬೇಕು ? ಮಾನ್ಯ ಶಶಿತಾರೋರ್‌ಜಿ ಅವರಿಗೆ ಏಷ್ಯಾದಲ್ಲಿ ಭಾರತೀಯ ವಿಶ್ವವಿದ್ಯಾನಿಲಯಗಳ ಶ್ರೇಣಿಯ ಬಗ್ಗೆ ಇತ್ತೀಚಿನ ಒಂದು ಸಮೀಕ್ಷೆ ಆಸಕ್ತಿ ಹುಟ್ಟಿಸಬಹುದು. ಏಷ್ಯಾದ ಮೊದಲ 40 ವಿಶ್ವವಿದ್ಯಾನಿಲಯಗಳಲ್ಲಿ ಒಂದೂ ಭಾರತೀಯ ವಿಶ್ವವಿದ್ಯಾನಿಲಯವೂ ಸಹಾ ಇಲ್ಲ. ಮತ್ತು, ಪ್ರಮುಖ ಏಷ್ಯನ್ ದೇಶಗಳಾದ ಚೈನಾ, ಜಪಾನ್, ದಕ್ಷಿಣ ಕೊರಿಯಾದ ವಿಶ್ವವಿದ್ಯಾನಿಲಯಗಳು ತಮ್ಮ ವಿಶ್ವವಿದ್ಯಾನಿಲಯಗಳ ವಿದ್ಯಾರ್ಥಿಗಳಿಗೆ ಪಾಠ ಹೇಳುತ್ತಿರುವುದು ಅವರವರ ಮಾತೃಭಾಷೆಗಳಲ್ಲೇ !

ಇಂಗ್ಲಿಷ್ ಭಾಷೆಯು ನಮಗೆ ಉಂಟು ಮಾಡಿರುವ, ಮತ್ತು ಈಗಲೂ ಸಹ ಹೆಚ್ಚಾಗಿ ಉಂಟುಮಾಡುತ್ತಿರುವ ಸಾಂಸ್ಕೃತಿಕ ನಷ್ಟಗಳ ಬಗ್ಗೆ ಎಷ್ಟು ಕಡಿಮೆ ಹೇಳಿದರೆ, ಅಷ್ಟು ಒಳ್ಳೆಯದು. ನಾವು ಬೆಳೆಸುತ್ತಿರುವ ಹೊಲಗದ್ದೆ ಪೀಳಿಗೆ, ತಮ್ಮ ಭಾಷೆ, ಸಾಹಿತ್ಯ, ಸಂಸ್ಕೃತಿ, ಚರಿತ್ರೆ, ಧರ್ಮ, ಜ್ಞಾನ ಅಥವಾ ವಿಜ್ಞಾನದ ಜೊತೆ ಸಹಾ ಯಾವುದೇ ಆತ್ಮೀಯ, ಸಮೀಪದ ಸಂಪರ್ಕವಾಗಲೀ, ಅಥವಾ ಉನ್ನತ ಕಲಾ ನಿರ್ಮಾಣ ಅಥವಾ ಗ್ರಹಿಕೆಗೆ ಆಳವಾದ ಅರಿವನ್ನಾಗಲೀ ಹೊಂದಿರದ ಒಂದು ಬರಡು ಪೀಳಿಗೆ. ಹಿಂದೆ ಪರ್ಷಿಯನ್ ಭಾಷೆಯ ಜೊತೆ ಸಂಪರ್ಕ ಹೊಂದಿದ್ದ ಭಾರತೀಯ ಪಂಚ ಪಟ್ಟಭದ್ರ ಗಣ್ಯರನ್ನು ಆಗಿನ ಕಾಲದಲ್ಲಿ ಬಾಬಾನಾನಕರು "ಮ್ಲೇಚ್ಛರು" (ಕೆಳಗೆ ಬಿದ್ದವರು) ಎಂದು ಕರೆದಿದ್ದರು. ಈಗ, ಇಂದಿನ ಭಾರತೀಯ ಪಟ್ಟಭದ್ರ ಹಿತಾಸಕ್ತಿಗಳ ಗಣ್ಯರು ಬಾಬಾನಾನಕ್ ಅವರ ಸಂದೇಶವನ್ನು ಕೂಡಾ ಆಳವಾಗಿ ಹೂತಿರುವಾಗ, ಗಾಂಧಿ ಮಹಾತ್ಮರ ಮಾತನ್ನು ಯಾರು ಕೇಳಿಸಿಕೊಳ್ಳುತ್ತಾರೆ ? ಅವರು ಧರಿಸಿದ್ದು ಕೇವಲ 'ಧೋತರ' (ತುಂಡು ಪಂಚೆ) ಅವರು ಭಾರತೀಯ ಸಂಸ್ಕೃತಿಗೆ ಬೈ–ಬೈ ಹೇಳಿ ಟೈ–ವೈ ಕಟ್ಟಿದ್ದರೆ, ಪರಿಸ್ಥಿತಿಯು ಬೇರೆಯೇ ಇರುತ್ತಿತ್ತು.

## VI. ಒಂದು ಭಾಷೆಯ ಸಾವು

ಇತ್ತೀಚಿನ ಒಂದು ಲೇಖನದಲ್ಲಿ (ಜೋಗಾಸಿಂಗ್ 2013); ನಾನು ಹೀಗೆ ಹೇಳಿದ್ದೆ– "ಇಂಗ್ಲಿಷ್‌ಗಿಂತ ಹಳೆಯ ಸಾಹಿತ್ಯಿಕ ಮತ್ತು ಬಹುಶಃ ಹೆಚ್ಚು ಸಮೃದ್ಧ ಇತಿಹಾಸ ಹೊಂದಿರುವ ಪಂಜಾಬಿ ಭಾಷೆಯೂ ಸಹ, ಪ್ರಪಂಚದ 10ನೇ ಅತಿ ಹೆಚ್ಚು ಮಾತನಾಡಲ್ಪಡುವ ಭಾಷೆ ಮತ್ತು ಭಾರತದ ಪಂಜಾಬ್ ರಾಜ್ಯದ ಅಧಿಕೃತ ಭಾಷೆ ಆಗಿದ್ದರೂ ಸಹ, ಒಂದು ಭಾಷೆಯ ಸಾವಿಗೆ ಕಡೆಯಲ್ಲಿ ಕೊಂಡೊಯ್ಯುವ ಪ್ರಕ್ರಿಯೆಯನ್ನು ಪ್ರವೇಶಿಸಿದೆ. ಭಾರತದ ಇತರ ಸಾಂವಿಧಾನಿಕ ಭಾಷೆಗಳ ಸ್ಥಿತಿಯೂ ಹೆಚ್ಚು–ಕಮ್ಮಿ ಹೀಗೇ ಇದೆ. ಈ ಪಟ್ಟಿಯಲ್ಲಿ ಹಿಂದಿಯನ್ನೂ ಸಹ ಸೇರಿಸಬಹುದು. ಸಂವಿಧಾನದ ಪಟ್ಟಿಯಲ್ಲಿ ಇಲ್ಲದ ಭಾಷೆಗಳ ಬಗ್ಗೆ ಏನೂ ಹೇಳಬೇಕಾಗಿಯೇ ಇಲ್ಲ. ಅವುಗಳಲ್ಲಿ ಹಲವು ಈಗಾಗಲೇ ಅಳಿವಿನ ಅಂಚಿನಲ್ಲಿ ಇವೆ.

"ಲ್ಯಾಂಗ್ವೇಜ್ ವೈಟಾಲಿಟಿ ಎಂಡ್ ಎಂಡೇಂಜರ್‌ಮೆಂಟ್" ಎನ್ನುವ ಶೀರ್ಷಿಕೆಯ ಯುನೆಸ್ಕೋ (2003) ದಾಖಲೆಯನ್ನು ಎಲ್ಲಾ ಓದುಗರೂ ಓದಬೇಕೆಂದು ನಾನು ವಿನಂತಿಸಿಕೊಳ್ಳುತ್ತೇನೆ. ಇದರಿಂದ ಅವರೇ ಸ್ವತಃ ಭಾರತೀಯ ಭಾಷೆಗಳ ಸ್ಥಿತಿಯ ಮೌಲ್ಯಮಾಪನ ಮಾಡಬಹುದು. ಇದರ ಬಗ್ಗೆ ಹೆಚ್ಚು ವಿವರವಾಗಿ ನಾನು ಹೇಳುವುದಿಲ್ಲ. ಆದರೆ, ಮುಂದೆ ಉದ್ಧರಿಸಿರುವ ಹೇಳಿಕೆಗಳು ಭಾರತೀಯ ಭಾಷೆಗಳು ಚಲಿಸುತ್ತಿರುವ ದಿಕ್ಕಿನ ಬಗ್ಗೆ ಒಂದು ಸೂಚನೆ ನೀಡುತ್ತವೆ.

"ಇದು ಭಾಷಾ ಸಾವಿನ ವಿಧಾನವನ್ನು ಪ್ರತಿಬಿಂಬಿಸುತ್ತದೆ; ಜನರು ತಮ್ಮ ಸ್ವಂತ ಭಾಷೆಯ ಬಗ್ಗೆ ಕೀಳರಿಮೆ, ಅವಮಾನ ಪಟ್ಟು, ಇನ್ನೊಂದು ಹೆಚ್ಚು ಪ್ರತಿಷ್ಠಿತ ಭಾಷೆಗೋಸ್ಕರ ಸ್ವಂತಭಾಷೆಯನ್ನು ತ್ಯಜಿಸುತ್ತಾರೆ. ಕ್ರಮೇಣ, ಅವರು ತಮ್ಮ ಸ್ವದೇಶಿ ಭಾಷೆಯನ್ನು ತಮ್ಮ ಮಕ್ಕಳಿಗೆ ರವಾನಿಸುವುದನ್ನು ನಿಲ್ಲಿಸುತ್ತಾರೆ. ಇದರಿಂದ, ಅಲ್ಪ ಸಂಖ್ಯಾತ ಭಾಷೆಯು ಅದನ್ನು ಮಾತನಾಡುವವರಿಂದ ಅವಜ್ಞೆಗೆ ಒಳಗಾಗಿ, ಕಡಿಮೆ ಸಂದರ್ಭಗಳಲ್ಲಿ ಸಮಂಜಸ ಆಗುತ್ತಾ ಹೋಗಿ, ಕಟ್ಟಕಡೆಗೆ ಒಳಬರುವ ಭಾಷೆಯಿಂದ ಸಂಪೂರ್ಣವಾಗಿ ದುರಾಕ್ರಮಣಕ್ಕೆ ಬಲಿಯಾಗುತ್ತದೆ."

(ಮೆಕ್‌ಮಹೋನ್, 1994:285)". @ *(ಎಕ್ಕರ್ಟ್, ಟಿ ಎಟ್ ಆಲ್, 2006)*

"ಆದರೆ ಭಾಷಾ ನಷ್ಟ.. ಶೈಕ್ಷಣಿಕ ವ್ಯವಸ್ಥೆಯಲ್ಲಿ ಸ್ಥಳೀಯ ಭಾಷೆಗಳ ಗೈರುಹಾಜರಿಯಿಂದಲೂ ಸಹ ಆಗುತ್ತದೆ. ಅಲ್ಪಸಂಖ್ಯಾತ ಭಾಷೆಗಳು, ಮತ್ತು ತತ್ಪರಿಣಾಮವಾಗಿ ಅವುಗಳ ಸಂಸ್ಕೃತಿಗಳನ್ನು ರಕ್ಷಿಸುವಲ್ಲಿ ಶಾಲೆಗಳು ಪ್ರಮುಖಪಾತ್ರ ವಹಿಸುತ್ತವೆ." @ *(ಎಕ್ಕರ್ಟ್, ಟಿ ಎಟ್ ಆಲ್, 2006)* ಆದರೆ, ಅವರಿಂದ ಸಾಧ್ಯವಾದರೆ, ಭಾರತೀಯ ಗಣ್ಯರು ನಾಳೆಯೇ ಎಲ್ಲಾ ಮಾತೃಭಾಷಾ ಮಾಧ್ಯಮದ ಶಾಲೆಗಳನ್ನು ಮುಚ್ಚಿಬಿಡುತ್ತಾರೆ. ಈ ವಿಷಯಕ್ಕೆ ಸಂಬಂಧಿಸಿದಂತೆ ಭಾರತೀಯ ಜ್ಞಾನ ಆಯೋಗ ಅತ್ಯಂತ ಹೆಚ್ಚು ನಿರ್ಲಕ್ಷ್ಯಕ್ಕೆ ಒಳಗಾಗಿರುವ ಸಂಸ್ಥೆ. ನಿಜವನ್ನು ತಿಳಿಯಲು, ಇಂಗ್ಲಿಷ್ ಭಾಷೆಯ ಬಗ್ಗೆ ಜ್ಞಾನ ಆಯೋಗ ನೀಡಿರುವ ಸಲಹೆಗಳನ್ನು ತಾವುಗಳು ದಯವಿಟ್ಟು ಓದಿರಿ.

**VII.** ಒಂದು ವಿನಂತಿ

ಭಾಷಾನೀತಿಯ ಬಗ್ಗೆ ಪ್ರಕಟವಾಗಲಿರುವ ನನ್ನ ಪುಸ್ತಕದ ಕೆಲವು ಭಾಗಗಳಿಂದ ಈ ದಾಖಲೆಯನ್ನು ತಯಾರಿಸಲಾಗಿದೆ. ಭಾಷಾ ವಿಷಯದ ಬಗ್ಗೆ ಇರುವ ಅಂತಾರಾಷ್ಟ್ರೀಯ ಅಭಿಪ್ರಾಯವನ್ನು ಭಾರತೀಯ ಪ್ರಜೆಗಳ ಗಮನಕ್ಕೆ ತಕ್ಷಣ ತರಬೇಕು ಎಂದು ನಾನು ಅಂದುಕೊಂಡೆ. ಆದ್ದರಿಂದ, ಈ ಕಿರುಹೊತ್ತಿಗೆಯನ್ನು ಪ್ರಕಟಿಸಲು ನಾನು ನಿರ್ಧರಿಸಿದೆ. ಈ ಕಿರುಹೊತ್ತಿಗೆಯ ಅನೇಕ ಭಾಗಗಳು ಪಂಜಾಬಿ ಭಾಷೆಯಲ್ಲಿ ಪಂಜಾಬಿ ಮಾಧ್ಯಮದಲ್ಲಿ ಪ್ರಕಟವಾಗಿವೆ. ಪಂಜಾಬಿನ ಹಲವು ಕಡೆ ಇದನ್ನು ಅನೇಕ ಭಾಷಣಗಳಲ್ಲಿ ನಾನು ಪ್ರಸ್ತುತಪಡಿಸಿದ್ದೇನೆ. ಹೆಚ್ಚಿನ ಓದುಗರನ್ನು ತಲಪುವ ಸಲುವಾಗಿ, ಈ ಕಿರುಹೊತ್ತಿಗೆಯನ್ನು ಪಂಜಾಬಿ, ಹಿಂದಿ, ಇಂಗ್ಲಿಷ್ ರೂಪಗಳಲ್ಲಿ ಮತ್ತು ಬಹುಶಃ ಇತರ ಭಾರತೀಯ ಭಾಷೆಗಳಲ್ಲೂ ಸಹ ಪ್ರಕಟಿಸಲಾಗುತ್ತಿದೆ. ಆದ್ದರಿಂದ, ತಮ್ಮ ಮಾತೃಭಾಷೆಗಳನ್ನು ಪ್ರೀತಿಸುವ ಮತ್ತು ಮಾತೃಭಾಷೆಗಳ ಅಡಿಪಾಯ ಇಲ್ಲದೆ ಭಾರತವು ಒಂದು ಆದುನಿಕ ದೇಶವಾಗಿ ಪ್ರಗತಿ ಹೊಂದಲಾರದು ಎಂದು ನಂಬಿರುವ ಎಲ್ಲಾ ಭಾರತೀಯ ಪ್ರಜೆಗಳನ್ನು ಈ ಕಿರುಹೊತ್ತಿಗೆಯನ್ನು ಇತರ ಭಾರತೀಯರ ಗಮನಕ್ಕೆ ತನ್ನಿ ಎಂದು ವಿನಂತಿಸಿಕೊಳ್ಳುತ್ತೇನೆ. ವಿವಿಧ ಭಾರತೀಯ ಭಾಷೆಗಳಿಗೆ ಈ ದಾಖಲೆಯ ಭಾಷಾಂತರ ಒಂದು ಅವಶ್ಯಕ ಕೆಲಸ. ಇದನ್ನು ಯಾವ ಭಾಷೆಗೆ ಮಾಡಬಲೊಲ ಯಾರಾದರೂ ಸಹ, ದಯವಿಟ್ಟು ಮಾಡಿ.

ನಾನು ಹೃದಯದ ಆಳದಿಂದ ಧನ್ಯವಾದ ಹೇಳುತ್ತೇನೆ. ಕೆಲವು ವ್ಯಕ್ತಿಗಳು ಈಗಾಗಲೇ ಕೆಲವು ಭಾಷೆಗಳಿಗೆ ಭಾಷಾಂತರಿಸುವ ಜವಾಬ್ದಾರಿ ಹೊತ್ತಿದ್ದಾರೆ. ಆದ್ದರಿಂದ, ನೀವು ಭಾಷಾಂತರ ಮಾಡುವ ಮೊದಲು, ನನ್ನನ್ನು ಸಂಪರ್ಕಿಸಿ. ಮುಂಚೆ ವಿವರಿಸಲಾದ ಕಾರಣಗಳಲ್ಲದೆ, ನಮ್ಮ ಮಾತೃಭಾಷೆಗಳನ್ನು ಅಪ್ಪಿಕೊಂಡು ಒಪ್ಪಿಕೊಳ್ಳಲು ಮತ್ತೊಂದು ಅವಶ್ಯಕ ಕಾರಣ ಇದೆ; ನಮ್ಮ ಮಾತೃಭಾಷೆಗಳಲ್ಲಿ ಸಂರಕ್ಷಿಸಲಾಗಿರುವ ಸಾವಿರಾರು ವರ್ಷಗಳ ಜ್ಞಾನ ಭಂಡಾರವನ್ನು ಅರ್ಥಮಾಡಿಕೊಂಡು, ಬರುವ ಪೀಳಿಗೆಗಳಿಗೆ ಬಳುವಳಿಗಳಾಗಿ ನೀಡಬೇಕು. ಇದು ನಮ್ಮ ಅತ್ಯುನ್ನತ ನೈತಿಕ ಹೊಣೆ. ಸ್ವಲ್ಪ ತಡ ಆದರೂ, ಸಾಂಸ್ಕೃತಿಕ ನಷ್ಟಗಳು ಉಂಟಾಗಬಹುದು.

**ಸ್ವೀಕೃತಿಗಳು :** ಹಲವಾರು ಪಂಡಿತರ ಸಂಶೋಧನಾ ಕೆಲಸಗಳಿಂದ ಹೆಚ್ಚಿನ ಸಂಖ್ಯೆಯ ಉಲ್ಲೇಖಗಳನ್ನು ಈ ದಾಖಲೆಯಲ್ಲಿ ಉಪಯೋಗಿಸಿಕೊಳ್ಳಲಾಗಿದೆ. ಅವರ ಸ್ವಾನಿಸ್ವಾರ್ಥ ದುಡಿಮೆ ಮತ್ತು ಬದ್ಧತೆಗಳೇ ಮಾತೃಭಾಷೆಗಳಿಗೆ ಶಕ್ತಿಶಾಲಿ ತತ್ವ ಬೆಂಬಲವನ್ನು ನೀಡಿವೆ. **(ಮಾತೃಭಾಷೆಗಳಿಗೆ ಜಯವಾಗಲಿ !)**

## References-cum-Bibliography:

Alisjabana S. Takdir. 1972. Writing a Normative Grammar for Indonesian. *Language Sciences* (Feb. 1972) : 11-14.

_____ . 1976. *Language Planning for Modernization*: The Case of Indonesian and Malaysian. The Hague : Mouton. Ammon, Ulrich. 2009.

Book Review. *Medium of Instruction Policies. Which Agenda? Whose Agenda?* by J.W. Tollefson and A.B.M. Tsui (eds). Mahwah, NJ and London: Lawrence, Erlbaum, 2004.

Bell, R. T. 1976 *Sociolinguistics: Goals, Approaches and Problems*. New York: St. Martins' Press.

Benson, Carol. 2005. *The Importance of Mother Tongue-based Schooling for Educational Quality, Commissioned study for EFA Global Monitoring Report.* Centre for Research on Bilingualism. Stockholm University.

Bernstein, B. 1966. Elaborated and Restricted Code: An Outline. *Sociological Inquiry*. 362:254-61.

_____ . 1971 *Class, Codes and Control: Theoretical Studies towards a Sociology of Language*. London: Routedge & Kegan Paul.

_____ . 1974. A Brief Accont of the Theory of Codes. Appendex to Bernstein 1971. Boas, F. 1911. *Handbook of American Indian Languages*. Washington: Smithsonian Inst.

Bokmla, E & J. Tlou. 1977. The Consequences of the Language Policies of African States vis-avis Education. In P. Kotey and H. Der-Houssikian, *Language and Linguistic problems of Africa* Colunbia. SC: Hornbeam press.

Branko, F. 1980. Laguage planning and Language Policies in Yugoslavia with Special Reference to Croation and Macedonian. *Lingua*. 51.1:55-72. Cronian, S. 1978. Nation Building and the Irish Language Revival Movement. *Eire Ireland*, 13:7-14.

Davis, F. B. (ed.). 1967. *Philippine Language Teaching Experiments*. Quezon city: Alemar phoenix.

De Silva, M. W. S. 1976. *Diglossia and Literacy*. Mysore: central Instiute of Indian Languages. Dua, H. R. 1976. Language Planning and political Theory. *International Jounral of Sociology of Language* 118:1-6.

Eckert, T. et al. 2006. Is English a 'killer language', The globalisation of a code. *Ethistling* 1:106-18

Fasold, R. 1984. *The Sociolinguistics of Society*. Basil Blackwell. Ferguson, C. 1968. Language Development. In C. Ferguage & J. Das Gupta (eds.) pp. 27-36.
Ferguage, C. & J. Das Gupta. 1968. *Language Problems of Developing Countries*. New York: John Wiley and Sons.
Fishman, J. 1964. Language Maintenance and Language Shift as Fields of Inquiry. *Linguistics.* 9: 32-70.
_____ . 1965. Who Speaks what Language to Whom and When. *Linguistics.* 2: 67-8.
_____ (ed.) 1968. *Readings in the Sociology of Language*. The Heague : Mounton.
_____ (ed.) 1974. *Advances in Language Planning*. The Hague: Moton.
_____ . 1975. The official Languages of Israel: Their Status in Law and Police Attitudes and Knowledge Concerning Them. In J. Savard and R. Vignaault (eds.), *Multilingual Political Systems: Problems and Solutions*. Quebec: Les preses de I'Universite' Laval pp. 497 535. Ferguson, C. 1977. Linguistic Theory. *In Bilingual Education: Current Perspectives*. Vol. 2 *Linguistics*. pp. 43-52.
Garvin, P.& M. Mathiot. 1956. The Urbanization of Guarani Language. In A.F.C Wallac (ed.), *Men and Cultures: Selected Papers from the Fifth Internatinal Conference of Anthropological and Ethnological Sciences.* Phiadelphia: University of Pennsylvania Press. pp. 365-74.
Gonzatez, G. 1977. Teaching Bilingual Children. In, Bilingual Education Current Perspectives. *Linguistics*: pp 53-9.
Graddol, David. 2000 (1997). *The Future of English? A Guide to Forecasting the Popularity of the English Language in the 21st century*. The Bitish Council.
Halliday, M.A.K. 1973. *The Linguistics Sciences and Language Teaching.* Longman. Halliday, M.A.K. 1973. *Explorations in the function of Language*. Edward Arnold.
_____ . 1978. *Language as Social Semiotic*. Edward Arnold.
Harries, L. 1976. The Nationalization of Swahili in Kenya. *Language Sciences* 5. 2: 153-64. Haugen, E. 1966. *Language Conflict and Language planning: The Case of Modern Norwegian*. Cambridge, MA: Harvard University Press.
_____ .1966. Linguistics and Language. In W. Bright (ed.) *Socioliguistics*. The Hague: Mouton pp. 50-71.
_____ .1968. Language Planning in Modern Noway. In J. Fishman (ed.), pp 673-86.
Hopkins, T. 1977. The Development and Implementation of the National Language policy in Kenya. in Kotey & Der Houssikian. pp. 84-96.
Hymes, D. 1972. Models of the Interaction of Language and Social Life. In J.J. Gumperz and D. Hymes, *Directions in Socioliguistics : The Ethrography of Communication*. Holt Rinehart, and Winston Inc. pp. 35-71.
Jakobson, R. 1960. Closing Statement: Linguistics and Poetics. In T. A. Sebeok (ed.), *Style in Language*. MIT. pp. 350-77.
Jernudd, B. 1973. Language Planning as a Type of Language Treatment. In J. Rubin & R. Shuy (eds), *Language Planning: Current issues and Research*. Washington, DC: Georgetown University Press. pp. 11-23.
Labov, W. 1966. *The Social Stratification of English in New York City*. Washington, DC: Centre for Applied Linguistics.
_____ .1970. The study of Language in its Social Context. *Studium Generale*. 23: 3087. Le'vi Strauss, C. 1972. *Structural Anthropology*. Penguin.
Li, C. and S. A. Thompson. 1979. Chinese: Dialect Variation and Language Reform. In T.Shopen (ed.), *Language and Their Status*. Cambridge, MA : Winthrop Publishers. pp. 295-332.
Modiano, N. 1966. *Reading Comprehension in the National Language: A Comparative Study of Bilingual and All Spanish Approaches to Reading Instruction in Selected Indian Schools in the Highlands of Chiapas*. Mexico. Ph.D. Dissertation, University of New York.
_____ . 1973. *Indian Education in the Chiapas Highlands*. New York: Holt, Rinchart, and Winston.
Neustupny, J. 1977. Language Planning for Australia. *Language Sciences*, 45:28-31. Pulston, C.B. 1977. Research. In, Bilingual Education: Current Perspectives. *Linguistics*. pp. 87-151. Polome', E.

and C.P. Hill. 1980. *Language in Tanzania*. Oxford: Oxford University Press for the International African Institute.
Ramos, M. et al. *The Determination and Implementation of Language Policy* Dobbs Ferry, NY: Oceana Publications.
Rawat, P.S. 1985 (1995). *Midline Medical Dictionary.* New Delhi: B Jain Pvt. Publishers Ltd. Ray, P.S. 1968. *Language Standardization*. In Fishman (ed.). pp. 754-65.
RICARDO M.A. DURAN NOLASCO. 2009. *21 Reasons why Filipino children learn better while using their Mother Tongue: A PRIMER on Mother Tongue-based Multilingual Education (MLE) & Other Issues on Language and Learning in the Philippines.* Guro Formation Forum, University of the Philippines.
Robinson, W.R. 1972. *Language and Social Behaviour*. Penguin. Rubin, J. 1973. *Language Planning: Discusstion on Some Current Issues*. In Rubin and Shuy (eds.). pp. 1-10.
Rubin, J. and B. Jernudd (eds.). 1971. *Can Languages be Planned*. Honolulu: University Press of Hawaii.
Rubin, J. & R. Shuy (eds.). 1973. *Language Planning: Current Issues and Research*. Washington, DC: Georgetown University Press.
Singh, Joga. 2002. Maat bhaasha da mahatav. *Samdarshi*. Punjabi Academy, Delhi.
Singh, Joga. 2013 panjabi nu kinna ku khatra (The Intensity of Endangerment to Punjabi, in Punjabi). *Philhal* 17:143-58.
Skutnabb-Kangas, T. 1975. Bilingualism, Semibilinguism, and Social Achievment. Paper *Presented at the 4th Internaitonal Congress of Applied Linguistics*. Stuttgart.
_____ . and P. Toukomaa. 1976. *Teaching Migrant Children's Mother-Tongue and Learning the Language of the Host Country in the Context of the Socio-cultural Situation of the Migrant Family*. Helsinki: The Finnish National Commission for UNESCO.
Spolsky, B. 1977. American Indian Bilingual Education: Linguistics, 19:57-72. Tucker, G.R., 1977. Bilingual Education: Current Perspectives, Vol. 2. *Linguistics*. Arlington, VA: Centre for Applied Linguistics.
UNDP Report. 2004. UNESCO. 1953. *The Use of Vernacular Languages in Education*. Monographs on Fundamental Education, No. 8. Paris.
UNESCO. 1953. *The Use of Vernacular Languages in Education. Monographs on Fundamental Education, No. 8.* Paris.
UNESCO. 1968. *The Use of Vernacular Languages in Education. In Joshua A. Fishman (ed.),*
UNESCO. 2008. *The Improvement in the Quality of Mother Tongue - Based Literacy and Learning.* Bankok:
UNESCO. Wijnstra, J. 1978. Education of Children with Frisian Home Language. *Paper Presented at the 19th International Conference on Applied Psychology*. Munich. Whorf, B.L. 1962. Language Thought and Reality. MIT.

**Joga Singh, M.A., M.Phil., Ph.D. (University of York, U.K.) Commonwealth Scholarship Awardee (1990-1993) Professor & Ex-Head, Department of Linguistics & Punjabi Lexicography Director, Centre for Diaspora Studies Punjabi University, Patiala - 147 002 (Punjab) - INDIA.**
**Mobile: +91-9915709582 Home: +91-175-2281582 Office: +91-175-304-6241/6511 E-mail: virkjoga5@gmail.com , jogasinghvirk@yahoo.co.in**